# ದೃಶ್ಯಧ್ಯಾನ

## ದೈವೀಕ ಪರಂಪರೆ ಮತ್ತು ಸಮಕಾಲೀನ ಕಲೆ



ಕೆ. ವಿ. ಸುಬ್ರಹ್ಮಣ್ಯಂ

# ದೃಶ್ಯಧ್ಯಾನ

## ದೈವೀಕ ಪರಂಪರೆ ಮತ್ತು ಸಮಕಾಲೀನ ಕಲೆ

ಕೆ.ವಿ. ಸುಬ್ರಹ್ಮಣ್ಯಂ

ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

**DRUSHYADHYANA**

Divine tradition and contemporaneous sensibility in the expressions of artists of karnataka.

By K.V. Subramanyam, Bengaluru.
Mob.: 9742622486

Published by : Indramma H.V., Registrar, Karnataka Lalitakala Academy, Bengalore-560 002. Ph : 080-22480297.
E-mail : kla.karnataka@gmail.com, www.lalitkalakarnataka.org/karnataka lalitha kala academy

Pages : VIII+112+8 = 128

Size : Demmy 1/8 th

Paper : NS Maplitho 70 Gsm

Price : 150/- Copies : 500

First Edition : 2017



**ದೃಶ್ಯಧ್ಯಾನ**

ದೈವೀಕ ಪರಂಪರೆ ಮತ್ತು ಸಮಕಾಲೀನ ಕಲೆ

**ಲೇಖಕರು** : ಕೆ.ವಿ. ಸುಬ್ರಹ್ಮಣ್ಯಂ, ಬೆಂಗಳೂರು.

**ಪ್ರಕಾಶಕರು:** ಇಂದ್ರಮ್ಮ ಹೆಚ್.ವಿ. ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು-02. ದೂರವಾಣಿ : 080-22480297.

**ಪುಟಗಳು : 8+112+8 =128**

**ಅಳತೆ : ಡೆಮ್ಮಿ 1/8**

**ಕಾಗದ : ಎನ್.ಎಸ್. ಮ್ಯಾಪ್ಲಿಥೋ 70 ಜಿ.ಎಸ್.ಎಂ**

**ಬೆಲೆ : 150/- ಪ್ರತಿಗಳು : 500**

**ಮೊದಲ ಮುದ್ರಣ** : 2017

**ಮುಖಪುಟದ ಕಲಾಕೃತಿಗಳು** : ದೇವನ ಹಳ್ಳಿಯ ದಿವಂಗತ ಚನ್ನಕೇಶವ ಆಚಾರ್ಯರ ಸಮುದ್ರ ಮಥನ.

ಮುದ್ರಣ :
**ಧರಣಿ ಪ್ರಿಂಟರ್ಸ್**
4ನೇ 'ಸಿ' ಅಡ್ಡರಸ್ತೆ, ಮಂಜುನಾಥನಗರ,
ರಾಜಾಜಿನಗರ, ಬೆಂಗಳೂರು-10. ಟೆಲಿಫೋನ್ : 080-23381791

# ಅಧ್ಯಕ್ಷರ ಮಾತು

ಕನ್ನಡದಲ್ಲಿ ನಿರಂತರವಾಗಿ ಕಲಾಬರಹಗಳನ್ನು, ವಿಮರ್ಶೆಯನ್ನು ಸುದೀರ್ಘವಾಗಿ ಬರೆಯುತ್ತಿರುವ ಶ್ರೀ ಕೆ.ವಿ.ಸುಬ್ರಮಣ್ಯಂ ಅವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯು 2016ರ 'ಗೌರವ ಫೆಲೋಷಿಪ್' ನೀಡಿ ಗೌರವಿಸಿದೆ. ಅಕಾಡೆಮಿ ನಿಯಮಾಳಿಯಂತೆ 'ಗೌರವ ಫೆಲೋಷಿಪ್' ಪಡೆದ ಕಲಾವಿದರು ಅವರ ಕನಿಷ್ಠ ಎರಡು ಕಲಾಕೃತಿಗಳನ್ನು ಅಕಾಡೆಮಿಯ ಸಂಗ್ರಹಕ್ಕೆ ನೀಡುವಂತೆ ಈ ಗೌರವ ಪಡೆದ ಕಲಾಬರಹಗಾರರು ತಮ್ಮ ಬರಹದ ಹಸ್ತಪ್ರತಿಯನ್ನು ಸಿದ್ಧಪಡಿಸಿ ನೀಡಬೇಕಾಗುತ್ತದೆ. ಇಂತಹ ಹಸ್ತಪ್ರತಿಯನ್ನು ಅಕಾಡೆಮಿಯೇ ಪ್ರಕಟಿಸುವ ಒಂದು ನವೀಕೃತ ಯೋಜನೆ ಈಗ ಪ್ರಾರಂಭವಾಗಿದೆ. ಸಂಪೂರ್ಣ ನಿಷ್ಕ್ರಿಯೆಯಾಗಿದ್ದ 'ಫೆಲೋಷಿಪ್ ಯೋಜನೆ' ಸುವರ್ಣ ಸಂಭ್ರಮದ ಅವಧಿಯಲ್ಲಿ ಸಂಚಲಗೊಂಡು 100ರಷ್ಟು ಯುವ ಕಲಾವಿದರಿಗೆ ಒಂದು ಲಕ್ಷ ರೂ. ಫೆಲೋಷಿಪ್ ಮತ್ತು ಮೂವರು ಹಿರಿಯ ಕಲಾವಿದರಿಗೆ ತಲಾ ಎರಡು ಲಕ್ಷ ರೂ. ಗಳೊಂದಿಗೆ 'ಗೌರವ ಫೆಲೋಷಿಪ್' ನೀಡಿ ಅಕಾಡೆಮಿ ಗೌರವಿಸಿದೆ. 2016ರ ಗೌರವ ಫೆಲೋಷಿಪ್ ಶ್ರೀ ಕೆ.ವಿ.ಸುಬ್ರಮ್ಮಣ್ಯಂ ಅವರಿಗೆ ಲಭಿಸಿದೆ. ಇಂತಹ ಗೌರವದ ನೆಪದಲ್ಲಿ ಶ್ರೀ ಕೆ.ವಿ.ಸುಬ್ರಮಣ್ಯಂ ಅವರು ಅಕಾಡೆಮಿಗೆ 'ದೃಶ್ಯಧ್ಯಾನ' ದಂತಹ ಕಲಾ ಸಾಹಿತ್ಯ ಕೃತಿ ನೀಡಿದ್ದಾರೆ.

'ದೃಶ್ಯಧ್ಯಾನ'-ದ ಐದು ವಿಭಿನ್ನ ಸಂಪುಟದಲ್ಲಿ 'ದೃಶ್ಯಕಲೆ'ಯ ಚರಿತ್ರೆಯ ಅಂತರಂಗವನ್ನು ಅವರ ಬರಹದ ಜೊತೆಗೆ ಅಯಾ ಕಾಲಘಟ್ಟದ ಕಲಾವಿದರ ಕೃತಿಗಳ ಮೂಲಕ ಕೆ.ವಿ.ಸುಬ್ರಮಣ್ಯಂ ಅವರು 'ದೃಶ್ಯಧ್ಯಾನ'ವನ್ನು ಕಟ್ಟಿಕೊಡಲು ಪ್ರಯತ್ನ ಮಾಡಿದ್ದಾರೆ. ಕಲಾ ಸಾಹಿತ್ಯ, ಕಲಾ ವಿಮರ್ಶೆಯಂತಹಾ ನಿರ್ಲಕ್ಷಿತ ಕ್ಷೇತ್ರದಲ್ಲಿ ಸಾಧನೆ ಮಾಡಲು ಬದ್ಧತೆ, ಪ್ರಾಮಾಣಿಕತೆ ಮತ್ತು ನಿಷ್ಠೂರತೆಗಳು ಒಬ್ಬ ಬರಹಗಾರನಿಗೆ ಬಹಳ ಮುಖ್ಯ. ಥಳುಕಿಗೆ, ಆಕರ್ಷಣೆಗೆ, ಜನಪ್ರಿಯತೆಗಾಗಿ ಬರೆದ ಕಲಾ ಬರಹಗಳು ಎಂದೂ ಕಲಾ ಸಮುದಾಯಕ್ಕಾಗಲಿ ಅದನ್ನು ಅಸ್ವಾದಿಸುವ ಸಮಾಜಕ್ಕಾಗಲಿ ಯಾವ ಉಪಕಾರವನ್ನು ಮಾಡುವುದಿಲ್ಲ. ಯಾಕೆಂದರೆ ಕಲಾಲೇಖಕ ತಾನು ಬರೆಯುವುದು ಅಕ್ಷರಗಳಲ್ಲಿ, ಅದರ 'ವಸ್ತು'- ಅಕ್ಷರ ರಹಿತ ದೃಶ್ಯಕಲೆ ಎನ್ನುವುದನ್ನು ನಾವು ಗಮನಿಸಬೇಕು. ಇಂತಹಾ ಸಂದರ್ಭದಲ್ಲಿ ಸಂಕೀರ್ಣವಾದ ಕಲೆಯ ಕುರಿತ ಬರಹಗಳು ಚಿಂತನೆಯ ಮೂಲದಿಂದ 'ಒಡಮೂಡ'ಬೇಕಾದ ಅವಶ್ಯವಿದೆ.

ಕೆ.ವಿ.ಸುಬ್ರಮಣ್ಯಂ ಅವರು ಅನೇಕ ದಶಕಗಳಿಂದ 'ಕಲಾ ಸಾಹಿತ್ಯ'ವನ್ನು ಕನ್ನಡದಲ್ಲಿ ಬಹಳ ನಿಷ್ಠೆಯಿಂದ, ಕಾಳಜಿಯಿಂದ ಬರೆದವರು. ಅವರ ಕಲಾ ಬರಹಗಳು ಒಮ್ಮೊಮ್ಮೆ ಏಕತಾನತೆ, ಚರ್ವಿತ, ಚರ್ವಣ ಎನಿಸಿದರೂ, ಕಲಾ ಚರಿತ್ರೆ ಮತ್ತು ಕಲಾ ಸಾಹಿತ್ಯದ ಹಿತದೃಷ್ಠಿಯಿಂದ ಅವರ ಬದ್ಧತೆಯನ್ನು ಸ್ವಾಗತಿಸುತ್ತೇನೆ. ಇಷ್ಟೊಂದು ಪ್ರಮಾಣದಲ್ಲಿ ನಿರತ-ನಿರಂತರವಾಗಿ ಕಲಾ

ಸಾಹಿತ್ಯದಲ್ಲಿ ತೊಡಗಿಕೊಂಡ ಸುಬ್ರಮಣ್ಯಂ ಅವರು ಇಂದಿನ ಪ್ರಸ್ತುತ ಕಲಾ ಸಂದರ್ಭದ ಸಂರಚನೆ, ತಾತ್ವಿಕ ಚಿಂತನೆ ಮತ್ತು ಪ್ರಯೋಗಗಳ ಸೈದ್ಧಾಂತಿಕ ನಿಲುವುಗಳ ಬಗ್ಗೆ ವಿಮರ್ಶೆ ಮಾಡಬಹುದಾದ ಸಾಮರ್ಥ್ಯವುಳ್ಳವರು ಅವರ ಈ ಅಧಿಕೃತತೆ ಮತ್ತು ತಾತ್ವಿಕ ಅರಿವಿನ ಎರಡೂ ಅಂಶಗಳ ಸಂಯೋಗದಿಂದ ಕನ್ನಡದ ಕಲಾ ಸಾಹಿತ್ಯ ಚಿಂತನೆಗೆ ಒಂದು ಅವಕಾಶವನ್ನು ಈ ಮೂಲಕ ಒದಗಿಸಬಹುದಿತ್ತು? ಅಕಾಡೆಮಿಯ ಫೆಲೋಷಿಪ್‌ನ ನೆಪದಲ್ಲಿ ಸುಬ್ರಮಣ್ಯಂ ಅವರಿಂದ ಇಂತಹದೊಂದು ವೈಚಾರಿಕ ಕೃತಿಯನ್ನು ಕಲಾವಿದನಾಗಿಯೂ ನಾನು ನಿರೀಕ್ಷಿಸುತ್ತಿದ್ದೆ. ಕರ್ನಾಟಕದ ಐದು ದಶಕಗಳ ಕಲಾ ಚರಿತ್ರೆಯನ್ನು ಗಮನಿಸುವಾಗ ನಮಗೆ ಕಾಣುವುದು ಚರ್ವಿತ-ಚರ್ವಣ, ತೆಳು ಮಾತಿನ, ಶಿಷ್ಟಾಚಾರದ ಮೇಲ್ಪದರದ ಬರಹಗಳು ಮಾತ್ರ. ಕಲಾವಿದನ ಅಂತರಾಳಕ್ಕೆ ಮುಟ್ಟುವ, ಅವನ ಬೌದ್ಧಿಕ ಆಲೋಚನೆ ಬೆಳೆಸುವ ಮತ್ತು ವೈಚಾರಿಕ ಚಿಂತನೆಗೆ ಹಚ್ಚುವ ಪ್ರಾಮಾಣಿಕ ಮಾತು-ಬರಹಗಳ ಮತ್ತು ಸ್ಪಷ್ಟ-ಸರಳ ಕಲಾ ಸಾಹಿತ್ಯ ಇಂದಿನ ಕಲಾ ಸಂದರ್ಭಕ್ಕೆ ಅತ್ಯಂತ ಅಗತ್ಯವಾದುದು.

ಈ ಪುಸ್ತಕಕ್ಕೆ ಶಿಷ್ಟಾಚಾರದ ಮುನ್ನುಡಿಯೊಂದಿಗೆ ನನಗೆ ಅನಿಸಿದ ನಾಲ್ಕು ಮಾತುಗಳನ್ನು ಸ್ಪಷ್ಟವಾಗಿ ಮತ್ತು ಮುಕ್ತವಾಗಿ ಇಲ್ಲಿ ವ್ಯಕ್ತಪಡಿಸಿದ್ದೇನೆ. ನನ್ನ ಕಲಾ ಸಮುದಾಯದ ಜಾಣ ಮೌನವನ್ನು ಮೀರಿ ಕಲಾವಿದರು ರಚಿಸಿದ, ರಚಿಸುತ್ತಿರುವ 'ಕೃತಿ'ಗಳ, ಬರಹಗಳ ಬಗ್ಗೆ ನಾನು ಹಾಗಾಗಿ ನೇರವಾಗಿ ಅಭಿಪ್ರಾಯ ಹಂಚಿಕೊಂಡಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ನಡಾವಳಿ ಸಮುದಾಯದ ಆರೋಗ್ಯ, ಅದನ್ನು ನಂಬಿದ ನನ್ನ ನೆಮ್ಮದಿಗೂ ಅಗತ್ಯವಾಗಿದೆ ಎಂದು ನಾನು ನಂಬಿದ್ದೇನೆ.

ಈ ಎಲ್ಲಾ ಮಾತುಗಳಿಗೆ ಕಾರಣವಾದ, ಕನ್ನಡದ ಅತ್ಯಂತ ವಿರಳವಾದ ಕಲಾ ಬರಹಗಾರರನ್ನು ನಾವು ಮರೆಯುವಂತಿಲ್ಲ. 70ರ ದಶಕದಲ್ಲಿ ಬಿ.ವಿ.ಕೆ. ಶಾಸ್ತ್ರಿಯವರ ನಂತರ ಅವರಷ್ಟೇ ನಿಷ್ಠೆಯಿಂದ ಇಂದಿಗೂ ತಮ್ಮ ಬರವಣಿಗೆಯನ್ನು ಮುಂದುವರಿಸಿದವರು ಕೆ.ವಿ.ಸುಬ್ರಮಣ್ಯಂ ಅವರ 'ದೃಶ್ಯಧ್ಯಾನ' ಕಲಾ ಸಾಹಿತ್ಯ ಚರಿತ್ರೆಯ ಒಂದು ಮೈಲುಗಲ್ಲು. ಇದರ ಬಗ್ಗೆ ಚರ್ಚೆ, ಪ್ರಾಮಾಣಿಕ ಓದು-ವಿಮರ್ಶೆಗಳು ನಡೆದಲ್ಲಿ ಆಗ ಕಲಾವಲಯ ತನ್ನ ಬೌದ್ಧಿಕ ಜೀವಂತಿಕೆಯಿಂದ ಉಸಿರಾಡುತ್ತಿದೆ ಎಂದು ಭಾವಿಸಬಹುದು. ಕಲಾವಿದರು, ಕಲಾ ವಿದ್ಯಾರ್ಥಿಗಳು, ಶಿಕ್ಷಕರು ಇದರ ಉಪಯೋಗ ಪಡೆದುಕೊಳ್ಳುವಂತಾಗಲಿ.

ಮುಂದಿನ ದಿನಗಳಲ್ಲಾದರೂ ಕೆ.ವಿ.ಸುಬ್ರಮಣ್ಯಂ ಅವರು ಅವರ ನೇರ, ನಿಷ್ಠೂರ, ಕಲಾವಿಮರ್ಶೆಯ ಮೂಲಕ ಕನ್ನಡ ಕಲಾ ಸಾಹಿತ್ಯಕ್ಕೆ ತಾರ್ಕಿಕ ಮತ್ತು ತಾತ್ವಿಕ ನೆಲೆಯ ಬರಹಗಳು ನೀಡುವಂತಾಗಲಿ ಎಂದು ಹಾರೈಸುತ್ತೇನೆ.

-ಡಾ.ಎಂ.ಎಸ್.ಮೂರ್ತಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

2017
ಶ್ರಾವಣ

# ಪ್ರಕಾಶಕರ ನುಡಿ

ನಮ್ಮ ನೆಲದ 'ಕಲಾ' ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ನಮ್ಮ ಕರ್ನಾಟಕ ಸರ್ಕಾರ ಲಲಿತಕಲಾ ಅಕಾಡೆಮಿಯನ್ನು ಸ್ಥಾಪಿಸಿದೆ. ಈಗ ೨೦೧೪ರಲ್ಲಿ ೫೦ ವರ್ಷದ ಸುವರ್ಣ ವರ್ಷಕ್ಕ ಕಾಲಿಟ್ಟ ಲಲಿತಕಲಾ ಅಕಾಡೆಮಿಯ ಈ ಸುಸಂದರ್ಭದಲ್ಲಿ ಇಲ್ಲಿಯವರೆಗೆ ನಮ್ಮ ಹಿರಿಯ ಕಲಾವಿದರು ಕಲಾ ಸಮುದಾಯಕ್ಕೆ ನೀಡಿದ ಕೊಡುಗೆಯನ್ನು ಅಪಾರ ಶ್ರಮವನ್ನು ನಾವು ನೆನೆಯಬೇಕಿದೆ. ಗೌರವಿಸಬೇಕಿಗಿದೆ. ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಸ್ತುತದಲ್ಲಿ ೨೦೧೫-೧೬ನೇ ಸಾಲಿನ ಸಾಮಾನ್ಯ ವರ್ಗದ ಫೆಲೋಷಿಪ್ ಯೋಜನೆಯಡಿ ಸಾಹಿತ್ಯಿಕವಾಗಿ ಶ್ರೀ ಕೆ.ವಿ.ಸುಬ್ರಮಣ್ಯಂ, ಬೆಂಗಳೂರು ಇವರನ್ನು ಆಯ್ಕೆ ಮಾಡಿರುತ್ತದೆ. ಅವರೂ ಕಲೆಗೆ ಸಂಬಂಧಿಸಿದ ದೈವೀಕ ಪರಂಪರೆ ಮತ್ತು ಸಮಕಾಲೀನ ಕಲೆ ಎಂಬ ಉಪ ಶೀರ್ಷಿಕೆಯಡಿ ದೃಶ್ಯಧ್ಯಾನ ಎಂಬ ಪುಸ್ತಕವನ್ನು ಬಹಳ ಅರ್ಥಪೂರ್ಣವಾಗಿ ಹಾಗೂ ಬಹಳ ಉಪಯುಕ್ತವಾದ ಪುಸ್ತಕವನ್ನು ಈ ಯೋಜನೆಯಡಿ ಬರೆದುಕೊಟ್ಟಿರುತ್ತಾರೆ. ಇಂತಹ ಉಪಯುಕ್ತವಾದ ಪುಸ್ತಕವನ್ನು ಕಲಾಕ್ಷೇತ್ರಕ್ಕೆ ನೀಡಿದ ಅತ್ಯುತ್ತಮ ಕೊಡುಗೆ. ಇಂತಹ ಉಪಯುಕ್ತ ಪುಸ್ತಕವನ್ನು ಬರೆದು ಕೊಡುಗೆ ನೀಡಿದ ಕೆ.ವಿ.ಸುಬ್ರಮಣ್ಯಂ ಅವರಿಗೆ ಅಭಿನಂದನೆಗಳು.

ಇಂತಹ ಪುಸ್ತಕಗಳಿಗೆ ಬೇಡಿಕೆ ದಿನೇ ದಿನೇ ವಿದ್ಯಾರ್ಥಿಗಳಿಂದ, ಕಲಾಸಕ್ತರಿಂದ, ಸಾರ್ವಜನಿಕರಿಂದ ಹೆಚ್ಚಾಗುತ್ತಿರುವುದನ್ನು ಕಂಡು ಶ್ರೇಷ್ಠವಾದ ಪುಸ್ತಕದ ಕೊರತೆ ಕಲಾಕ್ಷೇತ್ರಕ್ಕೆ ಕಾಡುತ್ತಿದೆ ಎಂದು ಮನಗೊಂಡು, ಇಂತಹ ಅಪರೂಪದ ಪುಸ್ತಕವನ್ನು ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದರೆ ಇಂತಹ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಆಶಾಭಾವ ಮೂಡಿತು. ಸದರಿ ಪುಸ್ತಕವನ್ನು ಸಂಪಾದಿಸಿರುವ ಶ್ರೀ ಕೆ.ವಿ.ಸುಬ್ರಮಣ್ಯಂ ಅವರು ಬಹಳ ಸುಂದರವಾಗಿ ಅರ್ಥಭರ್ಿತವಾಗಿ, ಸಾಹಿತ್ಯಿಕವಾಗಿ ಪುಸ್ತಕವನ್ನು ಹೊರತರಲು ಶ್ರಮಿಸುತ್ತಿದ್ದಾರೆ. ಅದರ ಅಂತಿಮ ಫಲವಾಗಿ ದೃಶ್ಯಧ್ಯಾನ ಎಂಬ ಪುಸ್ತಕವು ಹೊರಬರುತ್ತಿದೆ. ಶ್ರೀ ಕೆ.ವಿ.ಸುಬ್ರಮಣ್ಯಂ ಅವರಿಗೆ ಮತ್ತೊಮ್ಮೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಅದೇ ರೀತಿ ಈ ಪುಸ್ತಕದ ಮುದ್ರಣಕ್ಕೆ ಸೂಕ್ತ ಸಲಹೆ ನೀಡಿದ ಅಕಾಡೆಮಿಯ ಅಧ್ಯಕ್ಷರಾದ ಡಾ.ಎಂ.ಎಸ್.ಮೂರ್ತಿ ಅವರಿಗೂ, ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಧರಣಿ ಪ್ರಿಂಟರ್ಸ್, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಇಂದ್ರಮ್ಮ ಹೆಚ್.ವಿ**
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

# ನಿಮ್ಮೊಂದಿಗೆ . . .

ಕರ್ನಾಟಕದ ಸಂಸ್ಕೃತಿಗೆ ಹಲವು ಮೂಲದ ಕಲಾಪ್ರಕಾರಗಳು ಮಹತ್ವದ ಕೊಡುಗೆ ನೀಡಿವೆ. ದೃಶ್ಯಕಲೆಯ ಹಲವು ಟಿಸಿಲುಗಳು ಈ ಕೊಡುಗೆಯಲ್ಲಿ ವಹಿಸಿರುವ ಪಾತ್ರವು ಗಣನೀಯ. ದೃಶ್ಯಕಲೆಯ ಇತಿಹಾಸವು ನಮ್ಮಲ್ಲಿ ಇತಿಹಾಸ ಪೂರ್ವ ಕಾಲದಿಂದ ಆರಂಭಗೊಂಡು ಕ್ರಿ.ಶ. ೩ನೆಯ ಶತಮಾನದ ಸನ್ನತಿಯ ಬೌದ್ಧನೆಲೆಯ ಶಾತವಾಹನರ ಕಲೆಯ ಕಾಲದಿಂದ ಮುನ್ನಡೆದಿದೆ. ಬಾದಾಮಿ ಸುತ್ತಲಿನ ಕೆಲವು ಇತಿಹಾಸ ಪೂರ್ವ ಆದಿಮಚಿತ್ರ ನೆಲೆಗಳು ವಿಶ್ವಪರಂಪರೆಯ ನೆಲೆ ಬೀಂಬೀಡ್ಕಾದ ಸಮಕಾಲೀನ ಎಂದೂ ಹೇಳಲಾಗಿದೆ. ಬೀಂಬೇಡ್ಕಾ ನೆಲೆಯನ್ನು ಅನ್ವೇಷಿಸಿದ ಪ್ರೊ॥ ವಿಷ್ಣುವಾಕಾನ್ಕರ್ ಬಾದಾಮಿಯ ಕೆಲವು ಚಿತ್ರನೆಲೆಗಳನ್ನು ಅನ್ವೇಷಿಸಿದ್ದು ಗಮನಾರ್ಹ; ಇರಲಿ. ಆ ಹಿನ್ನೆಲೆಯ ಹಲವು ಸಂದರ್ಭಗಳಿಂದ ನಮ್ಮ ದೃಶ್ಯಕಲೆಯ ಧ್ಯಾನವು ಕಾಣಿಸಿಕೊಂಡಿದೆ. ಸನ್ನತಿಯ ಶಿಲ್ಪಗಳಲ್ಲಿ ಎಲ್ಲ ರಸಗಳೂ ಉಬ್ಬು ಶಿಲ್ಪಿತವಾಗಿವೆ. ಪರೋಕ್ಷಪ್ರಿಯ ದೇವನ ದೈವೀಕತೆಯೂ ಬದುಕಿನ ಇನ್ನಿತರ ರಸಭಾವ ಗಳೊಂದಿಗೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡಿದೆ; ಇಂದಿಗೂ ಮುಂದುವರೆದಿದೆ. ನಮ್ಮ ಸಮಕಾಲೀನ ಕಲಾವಿದ ಕಲಾವಿದೆಯರ ಹತ್ತು ಹಲವು ನೋಟಗಳ ನಡುವೆ ಹಲವು ಸೌಂದರ್ಯಗಳು ಬಿಂಬಿತವಾಗಿವೆ. ರೂಪಗಳಲ್ಲಿ 'ವಿಕೃತಿ' ಮತ್ತು 'ಸುಂದರ'ಗಳು ಇರುವಂತೆಯೇ ಭಾವಗಳಲ್ಲಿ ದೈವೀಕತೆಯ ಹಲವು ಭಾವಗಳು ಕಾಣಿಸಿಕೊಂಡಿವೆ. ಎಲ್ಲವೂ ಬಹುತೇಕ 'ಹಣ' ಕೇಂದ್ರಿತ ಬದುಕಿನ ಅವಲಂಬಿತ ನಡೆಗಳೇ ಆಗಿವೆಯಾದರೂ ಅಪರೂಪಕ್ಕೆ ದೈವೀಕ ಬುದ್ಧಿಭಾವಗಳೆರಡರ ಅನುಪಲ್ಲವಿಯಾಗಿಯೂ ಕಲಾಕೃತಿಗಳು ಮೂಡಿಬರುತ್ತಿವೆ. ನಮ್ಮ ಕರಕುಶಲ ಕಲಾವಿದರು ಹಿಂದು, ಜೈನ, ಬೌದ್ಧ, ಚಿತ್ರ-ಶಿಲ್ಪಗಳ ಸೃಷ್ಟಿಯಲ್ಲಿ ಸದಾ ನಿರತರಾಗಿರಲೇ ಬೇಕಾದ ಆಚರಣೆ, ಸಂದರ್ಭಗಳ ಸಮಾಜ ನಮ್ಮದು. ಯಾವುದೂ ನಿಲ್ಲುವುದಿಲ್ಲ. ಅಂದರೆ ಒಂದೇ ಸಂದರ್ಭದಲ್ಲಿ ಸಂಪ್ರದಾಯ ಚಿತ್ರ, ಶಿಲ್ಪ, ಸಮಕಾಲೀನ ಚಿತ್ರ, ಶಿಲ್ಪ ಇತ್ಯಾದಿಗಳೆಲ್ಲವೂ ಮೂಡಿಬರುತ್ತವೆ; ಅಸ್ತಿತ್ವದಲ್ಲಿ ಇರುತ್ತವೆ. ರಂಗೋಲಿ, ರೇಖಾ ಕಲೆಯೂ, ಕ್ಯಾನ್‌ವಾಸಿನ ತೈಲವರ್ಣ/ಆಕ್ರಿಲಿಕ್ ವರ್ಣಗಳ ಚಿತ್ರಗಳೂ, ಪ್ರಿಂಟ್, ಕ್ಯಾಮರಾ ಇತ್ಯಾದಿ ಮಾಧ್ಯಮಗಳ ಪ್ರಿಂಟ್‌ಗಳು, ಅಮೂರ್ತ, ನೈಜ ಶೈಲಿಯ ಕೃತಿಗಳೂ, ಇನ್‌ಸ್ಟಾಲೇಷನ್, ಹ್ಯಾಪೆನಿಂಗ್, ಪರ್‌ಫಾರ್ಮನ್ಸ್ (ಅಭಿನೀತ)ಗಳೂ ಇರುತ್ತವೆ; ಏಕಕಾಲದಲ್ಲಿ ನಮ್ಮ ನಡುವೆ ಎಲ್ಲವೂ ಇರುತ್ತವೆ. ಯಾವುದೂ ಸಂಪೂರ್ಣವಾಗಿ 'ಇಲ್ಲ'ವಾಗುವುದಿಲ್ಲ. ಇಂದಿಗೂ ರವಿವರ್ಮನ ಪ್ರಿಂಟ್‌ಗಳ ಮೂಲ ಪ್ರಿಂಟ್‌ಗಳೇ ಅಲ್ಲದೆ ನಕಲು ಪ್ರಿಂಟ್‌ಗಳೂ ಸಿಗುತ್ತವಲ್ಲವೇ! ಪ್ರತಿಯೊಂದು ಕಲೆಗಳು ತಮ್ಮದೇ ಆದ ತಮ್ಮ ಸಾಮರ್ಥ್ಯಕ್ಕೆ ತಕ್ಕ ರೀತಿಯಲ್ಲಿ ಸಾತತ್ಯಗೊಂಡಿರುತ್ತವೆ. ನಿರ್ದಿಷ್ಟ ಕಲಾಪ್ರಕಾರವೊಂದು ಅದರದೇ ವಿಶಿಷ್ಟ ಸಂದರ್ಭ

ಸೃಷ್ಟಿಯಾದಾಗ ಅತಿ ಕೆಳಹಂತದಲ್ಲಿದ್ದರೂ ಆ ಇನ್ನಿತರ ಕಲಾ ಪ್ರಕಾರಗಳಿಂತಲೂ ಎತ್ತರದಲ್ಲಿ ಎದ್ದು ಕಾಣುತ್ತದೆ. ಹಾಗೆಯೇ ದೈವ ಸಂಬಂಧೀ ಚಿತ್ರ-ಶಿಲ್ಪ ಸೃಷ್ಟಿಕಾರರು ಸಮಕಾಲೀನವಾಗಿ ಅಭಿವ್ಯಕ್ತಿಸುವ ತೀವ್ರತೆಯನ್ನು ಹೊಂದಿದಾಗ ಸಮಕಾಲೀನ ವಾಗಿಯೂ ದೈವೀಕತೆಯನ್ನು ದೃಶ್ಯಧ್ಯಾನವನ್ನಾಗಿಸಬಲ್ಲರು. ಇಂತಹವರು ನಮ್ಮ ನಡುವೆ, ಅಂದರೆ ಸಮಕಾಲೀನ ಸಂವೇದನಾಶೀಲರ ನಡುವೆ ಇದ್ದಾರೆ. ಹೀಗಾಗಿ ಹಲವು ರೀತಿಯ ದೃಶ್ಯಕಲಾ ಅಭಿವ್ಯಕ್ತಿಗಳು ವೈವಿಧ್ಯಮಯ ಕಲಾವಿದರಿಂದ ಧ್ಯಾನದಂತೆ ಕಾಣಿಸಿಕೊಂಡಿವೆ. ಈ ನೋಟದ ಕೆಲವು ಪುಟ್ಟ ಟಿಪ್ಪಣಿಗಳನ್ನು ಇಲ್ಲಿ ಕೊಟ್ಟಿದ್ದೇನೆ ಸ್ವಾತಂತ್ರಪೂರ್ವದ ಕೆಲವು ಅಪರೂಪದ ಮತ್ತು ಈವರೆಗೂ ಬಹುತೇಕ ನಮ್ಮ ಸಂದರ್ಭದಲ್ಲಿ ಅಪ್ರಕಟಿತ, ಕೆಲವು ಚಿತ್ರಗಳನ್ನು ನನ್ನ ಸಂಗ್ರಹದಿಂದ ಆಯ್ದು ಬಳಸಲಾಗಿದೆ. ನನ್ನ ಈ ಪ್ರಯತ್ನಕ್ಕೆ ಮುಖ್ಯ ಕಾರಣ ಕರ್ನಾಟಕ ಲಲಿತ ಕಲಾ ಅಕಾಡೆಮಿಯು ನನ್ನನ್ನು ೨೦೧೬ರ ಗೌರವ ಫೆಲೋಷಿಪ್‌ಗಾಗಿ ಆಯ್ಕೆಮಾಡಿದ ಸಂದರ್ಭ. ಆ ವಿಶಿಷ್ಟ ನೆಪದಲ್ಲಿ ಈ ಪುಟ್ಟ ಪುಸ್ತಕ ರೂಪುಗೊಳ್ಳಲು ಸಾಧ್ಯವಾಯಿತು. ಅಕಾಡೆಮಿಯ ಅಧ್ಯಕ್ಷರು ಡಾ|| ಎಂ.ಎಸ್. ಮೂರ್ತಿ ಮತ್ತು ಅವರ ಸದಸ್ಯ ಬಳಗ ಹಾಗೂ ರಿಜಿಸ್ಟ್ರಾರ್ ಹೆಚ್.ವಿ. ಇಂದ್ರಮ್ಮನವರುಗಳಿಗೆ ನಾನು ಆಭಾರಿಯಾಗಿದ್ದೇನೆ. ಈ ಪುಸ್ತಕದಲ್ಲಿ ದಾಖಲಿಸಿರುವ ಈಗ ಇಲ್ಲದ ಅನೇಕ ಹಿರಿಯ ಕಲಾವಿದರ ವಿಕ್ಷಿಪ್ತ ಬದುಕು ಮತ್ತು ಅಭಿವ್ಯಕ್ತಿಗಳು ಸಾಕಷ್ಟು ಕಾಡಿಸಿ ನನ್ನಿಂದ ಬರೆಸಿಕೊಂಡಿವೆ. ಆ ಹಿರಿಯರ ನೆನಪುಗಳ ನೆರಳು ಇನ್ನೂ ದಟ್ಟವಾಗಿದೆ. ಅದು ನಿರಂತರ. ಆ ಹಿರಿಯರ ಜತೆಜತೆಗೇ ಈ ಪುಸ್ತಕದ ಸಂದರ್ಭದಲ್ಲಿ ಸಾಂದರ್ಭಿಕವಾಗಿ ನನ್ನ ಸಮಕಾಲೀನ ಕಲಾವಿದ, ಕಲಾವಿದೆಯರು ಅನೇಕರು ಕಾಣಿಸಿಕೊಂಡಿದ್ದಾರೆ. ಪರೋಕ್ಷವಾಗಿ ಅವರ ಅಭಿವ್ಯಕ್ತಿಗಳು ನನ್ನನ್ನು ಪ್ರಭಾವಿಸಿ ಬಹುತೇಕ ಅಕ್ಷರ ರೂಪದಲ್ಲಿ ಕೆಲವೊಮ್ಮೆ ಚಿತ್ರಗಳ ರೂಪದಲ್ಲಿ ಪ್ರತ್ಯಕ್ಷಗೊಂಡಿವೆ. ಅವರ ಅಭಿವ್ಯಕ್ತಿಗಳು ಇಲ್ಲಿನ ನೋಟಗಳಿಗೆ ಕಾರಣವಾಗಿವೆ. ಈ ಎಲ್ಲರಿಗೂ ನಾನು ಋಣಿಯಾಗಿದ್ದೇನೆ. ಮೊದಲು ದೃಶ್ಯಕಲಾ ಇತಿಹಾಸ ಸೃಷ್ಟಿಯಾಗದೆ ವಿಮರ್ಶೆಯ ಅವಸರ ಅನಗತ್ಯ : ಹಾಗಾಗಿಯೇ ಈ ದೃಶ್ಯಕಲಾ ಪಠ್ಯ. ಈ ಪುಸ್ತಕವನ್ನು ನೀವು ನೋಡುತ್ತಿರುವಂತೆ ಸಾಕಷ್ಟು ಸುಂದರವಾಗಿ ಮುದ್ರಿಸಿರುವ ಧರಣಿ ಪ್ರಿಂಟರ್ಸ್ ಮಾಲೀಕರನ್ನು ಇಲ್ಲಿ ನೆನಪು ಮಾಡಿಕೊಳ್ಳಲೇಬೇಕು. ಈ ಪುಸ್ತಕದ ಓದುಗರಾದ ನಿಮ್ಮ ಓದುವಿಕೆ, ನೋಡುವಿಕೆಗಳು ಇಲ್ಲದೆ ಈ ಪುಸ್ತಕ ಪುಸ್ತಕವೇ ಆಗದು: ನಿಮ್ಮೆಲ್ಲರಿಗೂ ವಂದನೆಗಳು.

– ಕೆ.ವಿ. ಸುಬ್ರಹ್ಮಣ್ಯಂ
ಜನವರಿ-೨೦೧೭

# ಪರಿವಿಡಿ

ದೃಶ್ಯಧ್ಯಾನ

# 1. ಕರ್ನಾಟಕ ಚಿತ್ರಕಲೆಯ ದೈವೀಕ ಪರಂಪರೆ ಮತ್ತು ಸಮಕಾಲೀನತೆ

ಕರ್ನಾಟಕದ ಸಾಂಸ್ಕೃತಿಕ ಮೂಲವು ದೃಶ್ಯಾತ್ಮಕವಾದುದು. ದೃಶ್ಯಕಲೆಯ ಬೆಳವಣಿಗೆಯ ಅನುಕ್ರಮದಲ್ಲಿ ಅನುಕರಣೆ ಅನುಸರಣೆ ಮತ್ತು ಸಾಂಕೇತಿಕ ಸ್ವತಂತ್ರ ವಿಚಾರದ ಕ್ರಮಗಳಿವೆ. ಈ ಮೂರೂ ಕ್ರಮಗಳಲ್ಲಿ ಮೊದಲನೆಯ ಅನುಕರಣೆಯು ಮೂಲತಃ ಆರಂಭಗೊಳ್ಳುವುದೇ ಕಣ್ಣಿನ ನೋಟದಿಂದ; ಸುತ್ತಲಿನ ಹೊರ ನೋಟದ ದೃಶ್ಯಾತ್ಮಕ ಗ್ರಹಿಕೆಯಿಂದ. ಹೀಗಾಗಿ ಭಾಷೆಗಿಂತಲೂ ಮೊದಲು 'ದೃಶ್ಯ'ವೇ ಆದಿಮ ಸಂಸ್ಕೃತಿಯ ಆರಂಭ ಕಾಲದಿಂದಲೂ ಕಾಣಿಸಿಕೊಂಡಿದೆ[೧]. ರಾಷ್ಟ್ರದ ಮತ್ತು ರಾಜ್ಯದ ಹಲವೆಡೆ ೨೦೧೭ರಲ್ಲಿಯೂ ಇದ್ದ ಮತ್ತು ಹೊಸ ಅನ್ವೇಷಣೆಗಳಲ್ಲಿ ಕಾಣಿಸಿಕೊಂಡ ಆದಿಮ (Primitive) ಗುಹಾಚಿತ್ರಗಳು ಈ ದೃಷ್ಟಿಗೆ ಪೂರಕವಾಗಿವೆ.

ಮಾಂತ್ರಿಕ ದಂಡದಂತೆ (Magical Tool) ಇತಿಹಾಸ ಪೂರ್ವ ಕಾಲ ದಿಂದಲೇ ದುಡಿಸಿಕೊಳ್ಳಲ್ಪಟ್ಟ ಆದಿಮ ಗುಹೆ ಮತ್ತು ಶಿಲಾಶ್ರಯ ಚಿತ್ರಗಳು ಪ್ರಕೃತಿ ಮೂಲದ, ದೈವೀಕವೇ ಅಲ್ಲದೆ ಜೀವಮೂಲ ಪ್ರಾಣಿ, ಪಕ್ಷಿ, ಮನುಷ್ಯರ ರೂಪರಚನಾ ಪ್ರಕ್ರಿಯೆಗಳ ಜತೆಜತೆಗೇ ಸಾಂಕೇತಿಕ, ತಾಂತ್ರಿಕತೆಯ ಚಿತ್ರಭಾಷೆಯನ್ನೂ ಅರಗಿಸಿಕೊಂಡಿವೆ.


ಕ್ರಿ.ಶ. ೩ನೆಯ ಶತಮಾನ, ಶಾತವಾಹನರ ಸಂದರ್ಭ



ಕಲ್ಬುರ್ಗಿಯ ಮಾನಯ್ಯ ಬಡಿಗೇರ್‌ರವರ
ಕುಟುಂಬದ ಪರಂಪರೆಯ ಒಂದು ಶಿಲ್ಪ.
ಮಾಧ್ಯಮ : ಕಂಚು.



ಹಳೆಯ ಬೀಡಿನ ಹೊಯ್ಸಳರ ಒಂದು ಶಿಲ್ಪ



ರಾಯಚೂರು ಹತ್ತಿರದ ಬೈಲ್‌ಮರ್ಚೇಡ್‌ನ ಒಂದು ಹಸ್ತ ಮುದ್ರೆಯ ಚಿತ್ರ. ಆದಿ ಇತಿಹಾಸ ಕಾಲ

ಘಟ್ಟಮಾದಮಂಗಲ, ಟೇಕಲ್ ಆನೆಗೊಂದಿ ಹತ್ತಿರದ ರಾಮಾಪುರದ ಒನಕೆ ಕಿಂಡಿಯ ಹೊರಭಾಗದ ಎಡಗಡೆಯ ಶಿಲಾಶ್ರಯಗಳ ಕೆಲವು ತೆರೆದ ಬಂಡೆಯ ಅವಕಾಶಗಳಲ್ಲಿ ರಂಗೋಲಿಗೆ ಹತ್ತಿರವಾದ ತ್ರಿಭುಜ ಇತ್ಯಾದಿ, ಹಲವೆಡೆ ಛೇದಿಸಿದ ಆಕಾರಗಳು ಇವೆ. ವೃತ್ತ ತ್ರಿಶೂಲ ರೇಖಾಕಾರಗಳೂ ಒನಕೆ ಕಿಂಡಿ ಶಿಲಾಶ್ರಯ ಆವರಣದ ಒಳಗಿನ ವಿಶಿಷ್ಟ ಶಿಲಾಶ್ರಯವೊಂದರಲ್ಲಿ ಇವೆ. ದೈವಿಕ ಉದ್ದೇಶಗಳಿಗೂ ಆದಿಮ ಚಿತ್ರಕಲೆ ರೂಪುಗೊಂಡಿರಬಹುದಾದ ಸಾಧ್ಯತೆಗಳನ್ನು ಇವು ತೋರುತ್ತವೆ. ಬಳ್ಳಾರಿ ಜಿಲ್ಲೆಯ ಕುಮತಿಯ ಆದಿಮ ಗ್ರಾನೈಟ್ ಚಪ್ಪಟೆ ಮಾನವಾಕಾರ ಶಿಲ್ಪಗಳ ಕುರಿತ ದಂತಕತೆಯೊಂದೂ ದೈವ ಸಂಬಂಧೀ ಸೂಚಕವಾಗಿಯೇ ಕಾಣುತ್ತದೆ; ಇರಲಿ. ಹೀಗೆ ಕರ್ನಾಟಕದಲ್ಲಿ ಸುಮಾರು ೬೦ ಕ್ಕೂ ಹೆಚ್ಚು ಶಿಲಾಶ್ರಯಗಳಲ್ಲಿ[೨] ಬಿಳಿ, ಕೆಂಗಾವಿ ಬಣ್ಣದ ಚಿತ್ರಗಳು, ಬಂಡೆಗಳ ಮೇಲೆ ಕುಟ್ಟಿದ, ಗೀರಿದ ಚಿತ್ರಗಳು, ಅಪರೂಪಕ್ಕೆ ಆದಿಮ ಶಿಲ್ಪಗಳು (ಕುಮತಿ ಮತ್ತು ಯಾದಗಿರಿ) ಇವೆ. ಇದೇ ಪರಂಪರೆ ಶಿಷ್ಟ ಕಲಾ ಪರಿಕರ ವಿಧಾನಗಳೊಂದಿಗೆ ಇತಿಹಾಸ ಕಾಲದಲ್ಲಿಯೂ ಅಪರೂಪಕ್ಕೆ ಮುಂದುವರೆದಿದೆ.

ರಾಯಚೂರು ಜಿಲ್ಲೆಯ ಮಾನ್ವಿಯ ಬೆಟ್ಟದ ರಂಗೋಲಿಪಡಿಯ ವಿಜಯನಗರದ ಆಳ್ವಿಕೆಯ ಸಂದರ್ಭದ ಚಿತ್ರಗಳು ಶಿಲಾಶ್ರಯದ ಒಳಭಾಗದ ಬಂಡೆಗಳ ಮೇಲ್ಮೈಯನ್ನು ಅಲಂಕರಿಸಿವೆ. ಬಿಳಿಯ ಸುಣ್ಣ ಲೇಪಿಸಿದ ನಂತರ ಆ ಬಿಳಿಯ ಅವಕಾಶದಲ್ಲಿ ಕೆಂಗಾವಿ ಬಣ್ಣದಿಂದ ವಿಶಿಷ್ಟ ಕಣ್ಣುಗಳ ರೇಖಾ ಚಿತ್ರಗಳು

ಕೋಲಾರ ಜಿಲ್ಲೆಯ ಘಟ್ಟಮಾದ ಮಂಗಲದ
ಬೃಹತ್ ಶಿಲಾಯುಗದ (?)
ನೆಲೆಯ ಒಂದು ನೋಟ.
ಇಲ್ಲಿ ಕೆಂಗಾವಿ ಬಣ್ಣದ ಚಿತ್ರಗಳು ಇವೆ.



ಹಂಪಿ ಪ್ರದೇಶದ ವೀರಭದ್ರನ ಒಂದು
ಉಬ್ಬು ಶಿಲ್ಪ. ಮಾಧ್ಯಮ : ತಾಮ್ರ,
ಕಾಲ : ೧೯ನೆಯ ಶತಮಾನ.
(ಲೇಖಕನ ಸಂಗ್ರಹ)

ರೇಖಿಸಲ್ಪಟ್ಟಿವೆ. ಈ ಚಿತ್ರಗಳು ಬಹುಮುಖ್ಯವಾಗಿ ದೇವರ ಮೆರವಣಿಗೆಯೊಂದರ ವಿಶಾಲ ವ್ಯಾಪ್ತಿಯನ್ನು ಹೊಂದಿವೆಯಲ್ಲದೆ ವೈವಿಧ್ಯಮಯ ಜನರ, ಗುಂಪಿನ ಚಟುವಟಿಕೆಗಳನ್ನು ರೇಖಿಸಿವೆ. ಬಾದಾಮಿಯ ಆದಿಮ ಗುಹೆಯೊಂದರಲ್ಲಿ ಚಾಲುಕ್ಯ ರಾಷ್ಟ್ರಕೂಟರ ಸಂದರ್ಭದ(?) ಚಿತ್ರಕಾರರು ಶಿಷ್ಟ ಶೈಲಿಯಲ್ಲಿ ಮಣ್ಣಿನ ಬಣ್ಣಗಳಲ್ಲಿ ಚಿತ್ರಿಸಿರುವುದೂ ಗಮನಾರ್ಹ. ಈ ಪರಿಸರದಲ್ಲಿ ಇತಿಹಾಸ ಪೂರ್ವ ಸೀತಿದೋಣಿ, ಸಿಡಿಲಪಡಿ ಶಿಲಾಶ್ರಯ ಚಿತ್ರಗಳೇ ಅಲ್ಲದೆ ಚಾಲುಕ್ಯರ ಸಂದರ್ಭದ ಉಬ್ಬುಶಿಲ್ಪ, ಭಿತ್ತಿಚಿತ್ರಗಳಿವೆ. ಅವರ ಶಿಲ್ಪಿಗಳು ಕೃತಕವಾಗಿ ಕೊರೆದು ರೂಪಿಸಿದ ೩ ಗುಹಾ ದೇವಾಲಯ ಸೃಷ್ಟಿಗಳೂ ಇವೆ. ಹೀಗೆ ಶತಮಾನಗಳ ಅಂತರ, ನಂತರದ ದೃಶ್ಯಕಲೆಯ ಧ್ಯಾನವು ಇತಿಹಾಸ ಕಾಲದ ನಂತರವೂ ಹಲವು ಘಟ್ಟಗಳನ್ನು ಮೀರಿ ಮುನ್ನಡೆದು ಬಂದಿದೆ. ಪ್ರಾರಂಭದಲ್ಲಿ ಮಾಂತ್ರಿಕ ದಂಡದಂತೆ ಬಳಸಲ್ಪಟ್ಟ ನಮ್ಮ ದೃಶ್ಯ[೨b] ಕಲೆಯ ಪ್ರಕಾರವು ನಂತರದಲ್ಲಿ ಹಲವು ಉದ್ದೇಶಗಳಿಗಾಗಿ ವಿವಿಧ ಕಾಲಘಟ್ಟಗಳಲ್ಲಿ ನಮ್ಮ ಕಲಾವಿದ/ಕಲಾವಿದೆಯರಿಂದ ದುಡಿಸಿಕೊಳ್ಳಲ್ಪಟ್ಟಿದೆ.[೩] ನಮ್ಮವರ ದೃಶ್ಯಧ್ಯಾನವು[೪] ಹಲವು ಮಜಲುಗಳನ್ನು ಹಾದು ೨೦೧೬–೧೭ರ ವಿಶಿಷ್ಟ ಸಂದರ್ಭವನ್ನು ಸೃಷ್ಟಿಸಿಕೊಂಡಿದೆ. ಸಂದರ್ಭಗಳಿಗೆ ಪೂರಕವಾಗಿ ಬದಲಾದ ಕಲಾಸೃಷ್ಟಿಕಾರರಂತೆ, ಕಲೆಯ ಪೋಷಕರೂ ಬದಲಾಗಿದ್ದಾರೆ. ಸಾಹಿತ್ಯ ಸಂಗೀತ ಮತ್ತು ನೃತ್ಯಗಳೂ ಇದೇ ಹಾದಿಯಲ್ಲಿವೆ.

ಕರ್ನಾಟಕದ ಇತಿಹಾಸದಲ್ಲಿ ಮುಖ್ಯವಾಗಿ ಗಂಗರು, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರ ಹಾಗೂ ನಂತರದ ನಾಯಕರ ಸಂದರ್ಭದಲ್ಲಿನ ದೃಶ್ಯಕಲೆಯು ವೈದಿಕ ಮತ್ತು ಪುರಾಣಗಳ ದೃಶ್ಯಲೋಕವೇ ಆವರಿಸಿದ ಧರ್ಮ



ಆನೆಗೊಂದಿ ಬಳಿಯ ಚಿಕ್ಕರಾಮಾಪುರದ 'ಒನಕೆ ಕಿಂಡಿ' ಬಳಿಯ ಬೃಹತ್ ಶಿಲಾಯುಗದ ಕೆಂಗಾವಿ ಬಣ್ಣದ ಚಿತ್ರಗಳು

ಮೂಲದ್ದೇ ಆಗಿದ್ದಿತು. ಅದೊಂದು ಸ್ವಾತಂತ್ರ್ಯ ಪೂರ್ವ ಸಂದರ್ಭದ ದೈವೀಕ ದೃಶ್ಯಧ್ಯಾನವೇ ಸರಿ. ಆ ಹೊತ್ತಿಗೆ ದೇಶೀ ಸಾಮರಸ್ಯದ ದರ್ಶನಧಾರೆ. ಶರಣ, ಸಂತ, ಮಹಾಂತ, ಸೂಫಿ, ಅವಧೂತ ಪರಂಪರೆಯ ಬೇರಿಗೆ ಅಂಟಿಕೊಂಡೇ ಮಾನವೀಯತೆಯ ಮಹತ್ತಾದ ಅರಿವಿನತ್ತ ಪಯಣಿಸಿದವರು ಹಲವರು. ಮನುಷ್ಯನ ಪ್ರಭಾವದ ಉದಾತ್ತತೆ ಮತ್ತು ನೀಚತನ, ದೈವೀಪ್ರೇಮ ಮತ್ತು ದಿವ್ಯ ಸ್ನೇಹವೇ ಅಲ್ಲದೆ ಪೈಶಾಚಿಕ ದ್ವೇಷಗಳಂತಹ ವೈರುಧ್ಯಮಯ ಸಂವೇದನೆಯನ್ನು ದೃಶ್ಯಕಲೆಯು ಸೂಕ್ಷ್ಮಗೊಳಿಸಿದೆ; ಮನುಷ್ಯತ್ವವನ್ನು ದರ್ಶಿಸಿದೆ. ದೃಶ್ಯ ಕಲಾ ಸೃಷ್ಟಿಯು ಹೀಗೆ ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಹೊಣೆಗಾರಿಕೆಯಿಂದ ಕಾಣಿಸಿಕೊಂಡಿದೆ. ಬಹುತೇಕ ಇತಿಹಾಸ ಕಾಲದ ಅರಸರ ಆಳ್ವಿಕೆಯ ಸಂದರ್ಭದ ದೃಶ್ಯ ಕಲಾವಿದರೇ ಅಲ್ಲದೆ ೧೮ನೆಯ ಶತಮಾನದ ಸ್ವಾತಂತ್ರ ಪೂರ್ವದ ಹಲವಾರು ಕಲಾವಿದ ಕಲಾವಿದೆಯರೂ ಈ ಹಿನ್ನೆಲೆಯಲ್ಲಿ ಕಾಣುತ್ತಾರೆ. ಶಿವಮೊಗ್ಗದ ತಿಪ್ಪಾಜಪ್ಪ ಸುರಪುರದ ಗರುಡಾದ್ರಿ ಕುಟುಂಬದ ಬಾನಯ್ಯ, ವೆಂಕಟಯ್ಯ, ಬೆನಕಯ್ಯ ಮೊದಲಾದವರು, ಸಂತ ಶುಭರಾಯರು, ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀ ತತ್ವನಿಧಿ ಖ್ಯಾತಿಯ ಯಲ್ಲಯ್ಯ, ವೀರಣ್ಣ, ಸುಂದರಯ್ಯ, ಜಾವಗಲ್ಲು ನರಸಿಂಹಯ್ಯ, ನುಗುವನ ಹಳ್ಳಿ ನಾರಾಯಣಪ್ಪ, ದುರ್ಗದ ಕೃಷ್ಣಪ್ಪ, ತಿರುಪಳ್ಳಯ್ಯ ರಾಜು, ಕೆ. ವೆಂಕಟಪ್ಪ, ಸಿದ್ಧಲಿಂಗಸ್ವಾಮಿ, ಸ್ಥಪತಿ, ವೈ. ಸುಬ್ರಹ್ಮಣ್ಯರಾಜು ಮೊದಲಾದವರ ಕಲೆಯು ದೈವೀಕ ದೃಶ್ಯಧ್ಯಾನಕ್ಕೆ ಅರ್ಪಿತಗೊಂಡಿತ್ತು. ಈ ಎಲ್ಲರ ಕಲಾಕೃತಿಗಳಲ್ಲಿ ಆದಿಮ, ಗ್ರಾಮೀಣ–ಜನಪದೀಯ ಸತ್ವಗಳ ಬೇರುಗಳು ಪಾರಂಪರಿಕ ಕರಕುಶಲತೆಯಿಂದ ಕಾಣಿಸಿಕೊಂಡಿವೆ. ಇವರ ನಡೆಗಳು ನಮ್ಮ ಸಾಂಸ್ಕೃತಿಕ ಸ್ಮೃತಿಯ ನಾಶಕ್ಕೆ ಕಾರಣವಾದ ವಸಾಹತುಶಾಹಿ ಪ್ರಜ್ಞೆಯ ಆಧುನಿಕ ಪರಿಸರದ ನಡುವೆಯೂ ೧೯ನೆಯ ಶತಮಾನದ ಮೊದಲಾರ್ಧ ಭಾಗದವರೆಗೂ ಸಶಕ್ತವಾಗಿಯೇ ಇದ್ದವು. ಆದರೆ ೨೦ ನೆಯ ಶತಮಾನದ ಆರಂಭದಲ್ಲಿ ಜಾಗತೀಕರಣದ ಅಬ್ಬರದಲ್ಲಿ ಅಪರೂಪವಾದವು.

**ಕ್ರಿ.ಶ. 3ನೆಯ ಶತಮಾನದ ನಮ್ಮ ಶಿಲ್ಪಿಗಳು !**

ನಮ್ಮ ಸಮಾಜದ ಅಸಮಾನತೆಯ ನಡುವೆಯೂ ನಮ್ಮವರು ಭವ್ಯ ಆಧ್ಯಾತ್ಮೀಯ ನೋಟಗಳನ್ನು ಅಪ್ಪಿಕೊಂಡೇ ನಡೆದರು; ನಮ್ಮವರ ಮುಂದೆ ಕಣ್ಣಿಗೆ ಕಟ್ಟಿದಂತೆ ಪರಂಪರೆಯ ಪಠ್ಯ, ಚಿತ್ರ, ಶಿಲ್ಪ, ವಾಸ್ತುಶಿಲ್ಪ, ದೇವಾಲಯ ವಾಸ್ತುಶಿಲ್ಪ ಇತ್ಯಾದಿಗಳು ಇದ್ದವಷ್ಟೆ. ಎಲ್ಲವನ್ನೂ 'ಮೇಲಿನವನು' ನಮ್ಮಿಂದ ಮಾಡಿಸುತ್ತಾನೆ ಎಂದೇ ನಂಬಿದ, ಶತಮಾನಗಳ ಕಾಲದಿಂದ ಚಿತ್ರ ಶಿಲ್ಪ, ದೇವಾಲಯ ವಾಸ್ತು ಶಿಲ್ಪಗಳನ್ನು ಸೃಷ್ಟಿಸುತ್ತ ಬಂದ ಚಿತ್ರಕಾರರ, ಶಿಲ್ಪಿಗಳ ಪರಂಪರೆ ನಮ್ಮದು. ಹಾಗಾಗಿಯೇ ನಮ್ಮ ಸಂಪ್ರದಾಯ ಚಿತ್ರಕಾರರು, ಶಿಲ್ಪಿಗಳು ಸಹಿಮಾಡುವವರು ಆಗಿರಲಿಲ್ಲ. ಆದರೆ ಬದಲಾದ ಸಂದರ್ಭದಲ್ಲಿ ಕ್ರಿ.ಶ. ೩ನೇಯ ಶತಮಾನದಲ್ಲಿಯೇ ನಮ್ಮ ರಾಜ್ಯದ

ಸನ್ನತಿಯ ಶಾತವಾಹನರ ಬೌದ್ಧ ಸ್ತೂಪದ ಶಿಲ್ಪಗಳ ಮೇಲೆ ಅಂದಿನ ಮೂರು ತಲೆ ಮಾರಿನ ಶಿಲ್ಪಿಗಳ ಹೆಸರುಗಳನ್ನು ನೋಡಬಹುದು. ವಿಶಾಖ, ಮಾಧವನ ಮಗನು ಶಿಲ್ಪಿ ರಾಜಾಮಾತ್ಯ ಬೋಧಿಗುಪ್ತನು, ಸ್ವಾಮಿನಾಗನ ಮೊಮ್ಮಗನು, ವಾಸುದೇವನ ಮರಿಮಗನು, ಶಿಲ್ಪಿ ನಾಗಬೋಧಿ ಮೊದಲಾದ ಮೂರು ತಲೆಮಾರಿನ ಶಿಲ್ಪಿಗಳ ಹೆಸರುಗಳಿವೆ. ಈ ಪರಂಪರೆಯಲ್ಲಿಯೇ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಮೈಸೂರ ಅರಸರ ಸಂದರ್ಭದ ಶಿಲ್ಪಿ-ಚಿತ್ರಕಾರರ ಹೆಸರುಗಳೂ ಕಾಣಿಸಿಕೊಂಡಿವೆ.[೫]

**ಟಿಪ್ಪಣಿಗಳು :**

೧. ದೃಶ್ಯವು ಭ್ರಮೆ ; ಭ್ರಾಂತಿ ಎಂದೇ ಭಾವಿಸಿರುವ 'ಅಷ್ಟಾವಕ್ರ ಗೀತಾ'ದ ಈ ಸಾಲುಗಳನ್ನು ಗಮನಿಸಿ.



ಯಾದಗಿರಿ ಹೊರವಲಯದ ಬೃಹತ್ ಶಿಲಾಯುಗದ ಒಂದು ಶಿಲ್ಪ

ಸ್ವಭಾವಾದೇವ ಜಾನಾನೋ ದೃಶ್ಯಮೇತನ್ನ ಕಿಞ್ಚನ ।
ಇದಂ ಗ್ರಾಹ್ಯಮಿದಂ ತ್ಯಾಜ್ಯಂ ಸಕಿಂ ಪಶ್ಯತಿ ಧೀರಧೀ : ॥೧೩॥

ದೃಶ್ಯವೆಲ್ಲಾ ಭ್ರಮೆ/ಭ್ರಾಂತಿ ಎಂದು ಅರಿತ ಧೀರನು ಒಂದನ್ನು ಸ್ವೀಕರಿಸಬೇಕು ಮತ್ತೊಂದನ್ನು ತ್ಯಜಿಸಬೇಕು ಎಂದು ಹೇಗೆ ಭಾವಿಸುವನು ? ಎಂದಿದೆ.

೨. ಹಂಪಿಯ ವಿಠಲ ದೇವಾಲಯದ ಬಳಿಯ ಮಸಲಯ್ಯನ ಗುಡ್ಡದ ಎರಡು ಶಿಲಾಶ್ರಯಗಳಲ್ಲಿ ನಿರ್ದಿಷ್ಟ ಕಲ್ಲಿನ, ನಿರ್ದಿಷ್ಟ ಸ್ಥಳಾವಕಾಶದಲ್ಲಿ ಮತ್ತೊಂದು ಕಲ್ಲಿನಿಂದ ಕುಟ್ಟಿ, ಬಡಿದು ಶಬ್ದ ಸಂಕೇತಗಳನ್ನು ಶಿಲಾಶ್ರಯದ ಹಲವು ಒಳಮೂಲೆಗಳಲ್ಲಿರುವವರಿಗೆ ಏಕಕಾಲದಲ್ಲಿ ರವಾನಿಸುವ ಸಾಧ್ಯತೆಗಳನ್ನು ಬೃಹತ್ ಶಿಲಾಯುಗದ ಜನ ದುಡಿಸಿಕೊಂಡಂತಿದೆ. ಹಾಗೆಯೇ ನಿರ್ದಿಷ್ಟ ಆಚರಣೆಗಳ ಸಂಬಂಧಿಯಾದ ಶಬ್ದ ಸೃಷ್ಟಿಗೂ ಈ ನಿಮ್ನ ಕುಳಿಗಳು ಕಾರಣವಾಗಿರಬಹುದು.

ಇಲ್ಲಿನ ಎರಡೂ ನೆಲೆಗಳ ಎರಡು ಕಲ್ಲುಗಳ ಹಲವೆಡೆ ಹಲವುಬಾರಿ ತಾಡನ ಮಾಡಿ/ಬಡಿದು ಉಂಟುಮಾಡಿರುವ ನಿಮ್ನ ಅವಕಾಶದ ಹಲವಾರು ಕುಳಿಗಳು ಇವೆ. ಈ ಎರಡೂ ಕಲ್ಲುಗಳ ಅವಕಾಶಗಳ (Space) ಒಂದರಲ್ಲಿ ಕುಟ್ಟಿದ ಚಿತ್ರವಿದ್ದರೆ ಮತ್ತೊಂದರಲ್ಲಿ ಕೆಂಗಾವಿ ಬಣ್ಣದಿಂದ ಚಿತ್ರಿಸಿ ಈ ಚಿತ್ರರೂಪಗಳಿಗೂ. ಶಬ್ದಗಳಿಗೂ ಸಂಬಂಧವಿಲ್ಲ ದಿದ್ದರೂ, ಚಿತ್ರಗಳಿಗೆ ಸಾಂಕೇತಿಕ ಅರ್ಥವಂತೂ ಇರಬಹುದು. ಹೀಗಾಗಿ ಶಬ್ದ ಸೃಷ್ಟಿಗಿಂತಲೂ ಮೊದಲೇ ದೃಶ್ಯಕಲೆಯು ಇಲ್ಲಿ ಕಾಣಿಸಿ ಕೊಂಡಿರುವಂತಿದೆ.



ಆನೆಗೊಂದಿ ಬಳಿಯ
ಚಿಕ್ಕರಾಮಾಪುರದ
ಒನಕೆ ಕಿಂಡಿ ಒಳಗಿನ ಬೃಹತ್
ಶಿಲಾಯುಗದ ಒಂದು ಕೆಂಗಾವಿ ಚಿತ್ರ

೨೭. ಶಂಕರಾಚಾರ್ಯರು ತಮ್ಮ 'ಉಪದೇಶ ಸಾಹಸ್ರಿ'ಯಲ್ಲಿ 'ಆತ್ಮನು ದೃಶ್ಯವಸ್ತುವು ಅಲ್ಲ; ಅವನು ದ್ರಷ್ಟೃ'ಎಂದು ಸಾಧಿಸುತ್ತಾರೆ. ಈ ನೋಟಕ್ಕೆ ಪೂರಕವಾಗಿ ಮುಂದಿನ ಕೆಲವು ವಿವರಗಳನ್ನು ಗಮನಿಸಬಹುದು. ಶಂಕರಾಚಾರ್ಯರ 'ಉಪದೇಶ ಸಾಹಸ್ರಿ'ಯ ನಾನ್ಯ ದನ್ಯತ್ ಪ್ರಕರಣದ ಸ್ಮರತೋ ದೃಶ್ಯತೇ ದೃಷ್ಟಂ ಪಟೇ ಚಿತ್ರಮಿ ವಾರ್ಪಿತಮ್। ಯತ್ರ ಯೇನ ಚತೌ ಜ್ಞೇಯೌ ಸತ್ತ್ವಕ್ಷೇತ್ರಜ್ಞ ಸಂಜ್ಞಕೌ ॥೨॥

ಮಾತುಗಳಲ್ಲಿ ಕಂಡದ್ದನ್ನು ಸ್ಮರಿಸುವಾಗ ಅದು ಬಟ್ಟೆಯ ಮೇಲೆ (ಅಂತಃ ಕರಣದಲ್ಲಿ) ಚಿತ್ರಿಸಿದ ಚಿತ್ರದಂತೆ ಕಾಣುವುದು. ಆ ಚಿತ್ರವು ಯಾರಿಂದ ಕಾಣಲ್ಪಡುತ್ತದೆಯೋ ಅವನು ಕ್ಷೇತ್ರಜ್ಞನೆಂದೂ, ಎಲ್ಲಿ ಅದುವು ಕಾಣಲ್ಪಡುತ್ತದೆಯೋ ಅದು ಅಂತಃ ಕರಣವೆಂದು ತಿಳಿಯಬೇಕು ಎಂಬ ಭಾವವಿದೆ. ಹತ್ತೊಂಬತ್ತನೆಯ ಅಧ್ಯಾಯನದ ಅಥ ಭೇಷಜ ಪ್ರಯೋಗ ಪ್ರಕರಣದ 'ದ್ರಷ್ಟಾಚ ದೃಶ್ಯಂ ಚತಥಾ ಚ ದರ್ಶನಂ, ಭ್ರಮಸ್ತು ಸರ್ವಸ್ತವ ಕಲ್ಪಿತೋ ಹಿ ಸಃ। ದೃಶೇಶ್ಚ ಭಿನ್ನಂನಹಿ ದೃಶ್ಯಮೀಕ್ಷ್ಯತೇ, ಸ್ವಪನ್ ಪ್ರಭೋಧೇನ ತಥಾನ ಭಿದ್ಯತೇ ಎಂಬಲ್ಲಿ 'ದ್ರಷ್ಟೃ ದೃಶ್ಯ ಮತ್ತು ಹಾಗೆಯೇ ದರ್ಶನ – ಇದೆಲ್ಲವೂ ಭ್ರಮೆಯೇ ಆಗಿದೆ. ಏಕೆಂದರೆ ಇದೆಲ್ಲವು ಕಲ್ಪಿತವಾದದ್ದಾಗಿದೆ. ದೃಕ್ಕಿಗಿಂತಲೂ ದೃಶ್ಯವು ಭಿನ್ನವಾಗಿ ಎಂದಿಗೂ ಕಾಣಿಸುವುದಿಲ್ಲ. ಹಾಗೆಯೇ ನಿದ್ರಿಸುವವನೂ ಎಚ್ಚರದಲ್ಲಿರುವ ವನಿಗಿಂತಲೂ ವಿಭಿನ್ನನಾಗಿರುವುದಿಲ್ಲ' ಎಂಬ ಭಾವವಿದೆ. ಶಂಕರಾಚಾರ್ಯರ 'ಉಪದೇಶ ಸಾಹಸ್ರಿ'ಯ ಸ್ವಪ್ನ ಸ್ಮೃತಿ ಪ್ರಕರಣದ 'ನಚಾಸ್ತಿ ಶಬ್ದಾದಿರನನ್ಯವೇದನಃ ಪರಸ್ಪರೇಣಾಪಿನ ಚೈವ ದೃಶ್ಯತೇ। ಪರೇಣ ದೃಶ್ಯಾಸ್ತು ಯಥಾ ರಸಾದಯ ಸ್ತಥೈವ ದೃಶ್ಯತ್ವತ ಏವ ದೈಹಿಕಾಃ' ॥೪॥

ಎಂಬ ಮಾತುಗಳಲ್ಲಿ "ಶಬ್ದಾದಿ ವಿಷಯಗಳು ಸ್ವಯಂ ಪ್ರಕಾಶವಲ್ಲ; ಆತ್ಮನಂತೆ, ಈ ಶಬ್ದಾದಿ ವಿಷಯಗಳು ಅಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಪರಸ್ಪರ ಒಂದು ಮತ್ತೊಂದರಿಂದ ಪ್ರಕಾಶಿಸಲ್ಪಡುವವುಗಳೂ ಅಲ್ಲ. ಹೇಗೆ ಹೊರಗಿನ ಸ್ಪರ್ಶ, ರೂಪ, ರಸ, ಶಬ್ದ ಇತ್ಯಾದಿಗಳು ದೃಶ್ಯವಾಗಿರುವುದರಿಂದ ಮತ್ತೊಬ್ಬರಿಂದ ನೋಡುವಂಥವು ಆಗಿರುವವೋ ಹಾಗೆಯೇ ದೇಹದಲ್ಲಿರುವ ರಸಾದಿಗಳೂ ದೃಶ್ಯವಾಗಿರುವುದರಿಂದ ಮತ್ತೊಬ್ಬರಿಂದ ಪ್ರಕಾಶಿಸಲ್ಪಡುವವುಗಳು ಆಗಿವೆ." ಎಂಬ ಭಾವವಿದೆ. ಆದರೂ ಶತಮಾನಗಳಿಂದ ಆತ್ಮ, ದೈವೀಕ ಅನುಭವಲೋಕವನ್ನು ಅಭಿವ್ಯಕ್ತಿಸಲು ಹಲವು ಹಾದಿಗಳನ್ನು ಮಾನವ ಕುಲವು ಅನ್ವೇಷಿಸುತ್ತಲೇ ಇದೆ.

೩. ದೃಶ್ಯಕಲೆಯ ಇತಿಹಾಸದ ಮರುಕಳಿಕೆಯಂತೆ, ಕಾಡುವ ಸ್ಮೃತಿಯಂತೆ ೨೧೧೪–

೧೭ರ ಸಂದರ್ಭದಲ್ಲಿಯೂ ಆದಿಮ ಪ್ರಜ್ಞೆಯು ನಮ್ಮ ಹಲವಾರು ಕಲಾವಿದ/ಕಲಾವಿದೆಯರಲ್ಲಿ ಕಾಣಿಸಿಕೊಂಡಿರುವುದು ಗಮನಾರ್ಹ. ಮಂಡ್ಯದ ಸುಜಿತ್ ಕುಮಾರ್‌ರವರಿಂದ ಆದಿಮ ಸತ್ವ ತೀವ್ರತೆಯ ಗೂಳಿಗಳ ನೂರಾರು ತೈಲವರ್ಣ ಕೃತಿಗಳು ಚಿತ್ರಿತಗೊಂಡಿವೆ.

೪. ಛಾಂದೋಗ್ಯ ಉಪನಿಷತ್ತಿನ ೭ನೆಯ ಅಧ್ಯಾಯದ ೬ನೆಯ ಖಂಡದ "ಧ್ಯಾನಂ ವಾವ ಚಿತ್ತದ್ಭೂಯೋ ಧ್ಯಾಯತೀವ ಪೃಥಿವೀ ಧ್ಯಾಯತೀವಾಂತರಿಕ್ಷ ಧ್ಯಾಯತೀವ ಧ್ಯೌರ್ಧ್ಯಾಯಂತೀವಾಪೋ ಧ್ಯಾಯಂತೀವ ಪರ್ವತಾ ಧ್ಯಾಯಂತೀವ ದೇವಮನುಷ್ಯಾಸ್ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವಂತಿ ಧ್ಯಾನಾಪಾದಾಂಶಾ ಇವೈವ ತೇ ಭವಂತ್ಯಥಯೇಲ್ಪಾಃ ಕಲಹಿನ ಪಿಶುನಾ ಉಪಾವಾದಿನಸ್ತೇಥ ಯೇ ಪ್ರಭವೋ ಧ್ಯಾನಾಪಾದಾಂಶಾ ಇವೈವ ತೇ ಭವತಿ ಧ್ಯಾನಾಮುಪಾಸ್ವೇತಿ" ॥೧॥ ಸನತ್ಕುಮಾರನು ನಾರದನಿಗೆ 'ಧ್ಯಾನವೇ ಮನಸ್ಸಿಗಿಂತ ಅಧಿಕವಾದುದು, ಪೃಥ್ವಿಯು ಧ್ಯಾನಿಸುವಂತಿದೆ, ಅಂತರಿಕ್ಷವು ಧ್ಯಾನಿಸುವಂತಿದೆ, ದ್ಯುಲೋಕವು ಧ್ಯಾನಿಸುವಂತಿದೆ, ನೀರು ಧ್ಯಾನಿಸುವಂತಿದೆ, ಪರ್ವತಗಳು ಧ್ಯಾನಿ ಸುವಂತಿವೆ, ದೇವತೆಗಳು ಮತ್ತು ಮನುಷ್ಯರು ಧ್ಯಾನಿಸುವಂತೆ ಇರುವರು. ಆದುದರಿಂದ ಮನುಷ್ಯರಲ್ಲಿ ಯಾರು ಈ ಲೋಕದಲ್ಲಿ ಮಹತ್ವವನ್ನು ಹೊಂದುತ್ತಾರೆಯೋ ಅವರು ಧ್ಯಾನ ಫಲಲಾಭದ ಅಂಶವನ್ನು ಪಡೆದವರಂತೆ ಇರುತ್ತಾರೆ. ಇನ್ನು ಯಾರು ಕ್ಷುದ್ರರಾಗಿರುವರೋ ಅವರು ಕಲಹಿಗಳೂ ಉಪವಾದಿಗಳೂ ಆಗಿರುತ್ತಾರೆ. ಆದರೆ ಯಾರು ಪ್ರಭುಗಳಾಗಿರುವರೊ ಅವರು ಧ್ಯಾನ ಫಲ ಲಾಭದ ಅಂಶವನ್ನು ಪಡೆದವರಂತೆ ಇರುತ್ತಾರೆ, ಧ್ಯಾನವನ್ನು (ಬ್ರಹ್ಮವೆಂದು) ಉಪಾಸಿಸು ಎಂದು ಹೇಳಿದನು.

ಪತಂಜಲಿಯ ಯೋಗಸೂತ್ರದಲ್ಲಿನ ಒಂದು ನಿರ್ದಿಷ್ಟ ವಸ್ತುವಿನ ಕುರಿತ ಜ್ಞಾನದ ನಿರಂತರ ಹರಿವು : ಧ್ಯಾನ ಎಂಬುದನ್ನು ವಿದ್ಯಾರಣ್ಯರು ತಮ್ಮ 'ಜೀವನ ಮುಕ್ತಿ ವಿವೇಕ'ದಲ್ಲಿ ಉಲ್ಲೇಖಿಸಿದ್ದಾರೆ. ಸುತ್ತಲಿನ ದೃಶ್ಯಲೋಕ ಕುರಿತ ನಮ್ಮ ನೋಟದ ನಿರಂತರ ಹರಿವು / ತೀವ್ರ ಅಧ್ಯಯನವು 'ದೃಶ್ಯಧ್ಯಾನ'ವೇ ಆಗಬಲ್ಲದು. ಇಲ್ಲಿ ದೃಶ್ಯ ಕುರಿತು ಧ್ಯಾನ, ಧಾರಣ Meditation, Samadhi, Contemplation ಎಂಬ ಪದಗಳು ನೆನಪಾಗುತ್ತವೆ.

೫. ರಾಷ್ಟ್ರಕೂಟರ ಸಂದರ್ಭದ ಚಿತ್ರಕಾರ ಚೀರಘಟ್ಟಿ ಎಂಬುವವನ ಕುರಿತು ಪೊನ್ನನ ಶಾಂತಿಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿದೆ.(ಶಾಂತಿ ಪುರಾಣ : ೧-೬೪, ೮-೪೧.) ನಂತರ ಶಾಂತಿನಾಥ, ನಾಗಚಂದ್ರ, ರುದ್ರಭಟ್ಟ, ಅಗ್ಗಳ, ಗುಣವರ್ಮ ಇವರುಗಳೂ ಚೀರಘಟ್ಟಿಯನ್ನು ನೆನಪಿಸಿಕೊಂಡಿದ್ದಾರೆ. ಚಾಲುಕ್ಯರ

ಸಂದರ್ಭದ ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದ ಮಿಥುನ ಶಿಲ್ಪಗಳ ಮೇಲೆ ಗುಂಡನ್ ಅನಿವಾರಿತಾಚಾರ್ಯ ಎಂಬ ಶಿಲ್ಪಿಯ ಹೆಸರಿದೆ. ಹೊಯ್ಸಳರ ಸಂದರ್ಭದಲ್ಲಿ ದಾಸೋಜ, ಅವನ ಮಗ ಚಾವಣ, ಕಾಳಿದಾಸ, ಮಲ್ಲೋಜ, ರಾಮೋಜ, ಮಾಬಣ, ಕೇದಾರೋಜ, ಚಿಕ್ಕಹಂಪ, ಮಲ್ಲಿಯಣ್ಣ, ಪಾದರಿ, ನಂದಿಯ ಜೈಚೋಜ, ಕೆಂಚಮಲ್ಲಿಯಣ್ಣ, ಪೊಯ್ಸಳಾಚಾರಿ, ಮರುಳೋಜ, ಮಲ್ಲಿತಮ್ಮ, ಪದುಮಣ, ಬಲುಗ, ಬೂತಯ್ಯ, ಬೈಚೋಜ, ಚಿಕ್ಕಮಲ್ಲಿತಮ್ಮ, ಮಾಬಕಾ ಮೊದಲಾದ ನೂರಾರು ಶಿಲ್ಪಿಗಳು ಇದ್ದರು.

ಹೊಯ್ಸಳರ ಶಿಲ್ಪಿಗಳಿಗೆ ಹಲವಾರು ಬಿರುದುಗಳೂ ಇದ್ದವು. ದಾಸೋಜನು ತನ್ನನ್ನು "ಬಿರುದು ರೂವಾರಿ ಗೊಂದಲ ಬಡಿವ" ಎಂದು ಕರೆದುಕೊಂಡಿದ್ದರೆ, ನಾಗೋಜನು "ಸುಜನ ಮನೋರಂಜನ," ರೂವಾರಿ "ಜಗದ್ದಳ" ಎನ್ನಿಸಿಕೊಂಡಿದ್ದಾನೆ. ಗಂಗಾ ಚಾರಿಯನ್ನು "ಬಿರುದು ರೂವಾರಿ ಮುಖ ತಿಳಕ" ಎಂದು ಕರೆಯಲಾಗಿದೆ. ವಿಶೇಷಣಗಳ ಮೂಲಕವೂ ಶಿಲ್ಪಿಗಳನ್ನು ಗುರುತಿಸಲಾಗಿದೆ. ವಿದ್ಯಾವಂತ ಪೊಯ್ಸಳಾಚಾರಿ, ಪ್ರಾಸಾದ ಚಕ್ರವರ್ತಿ, ಸರಸ್ವತೀ ಗಣಪಾದ ಪಂಕಜ ಭ್ರಮರಂ, ಸರಸ್ವತೀ ಗಣದಾಸಿ, ಬಿರುದು ರುವಾರಿ, ರೂವಾರಿ ಬೈರವ, ಗಿರಿ ವಜ್ರದಂಡ, ಸರಸ್ವತಿ ಗಣಮಿತ್ರ, ಶರಭ ಭೇರುಂಡ, ಎಂಬುವೆಲ್ಲಾ ಗಮನಾರ್ಹವಾಗಿವೆ.

ಮೈಸೂರು ಅರಸರ ಆಸ್ಥಾನದಲ್ಲಿಯೂ ಹಲವಾರು ಚಿತ್ರಕಲಾವಿದರು ಸಂಪ್ರದಾಯ ಚಿತ್ರಗಳ ಅಡಿಯಲ್ಲಿಯೂ ತಮ್ಮ ಹೆಸರುಗಳನ್ನು ನಮೂದಿಸಿದ್ದಾರೆ. ಜಾವಗಲ್ಲು ನರಸಿಂಹಯ್ಯ, ನಾರಾಯಣ, ತಿಪ್ಪಾಜಿ, ಯಲ್ಲಯ್ಯ ಮೊದಲಾದವರು ಈ ಹಿನ್ನೆಲೆಯಲ್ಲಿ ಗಣನೀಯರು.

**ಗ್ರಂಥಋಣ :**


೧. ದೃಗ್-ದೃಶ್ಯವಿವೇಕ, ೧೯೮೭, ಶ್ರೀರಾಮಕೃಷ್ಣ ಆಶ್ರಮ, ಮೈಸೂರು – ೫೭೦ ೦೨೦.

2. Christian and oriental philosophy of art. 2008, Ananda K. Coomaraswamy, Munshiram Manoharlal, Publishers Pvt.Ltd. New Delhi.

೩. ಛಾಂದೋಗ್ಯೋಪನಿಷತ್, ಅನು : ಟಿಪ್ಪಣಿಗಳೊಡನೆ ಸ್ವಾಮಿ ಆದಿದೇವಾನಂದ, ೧೯೮೯, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು.

೪. ಶಂಕರಾಚಾರ್ಯರ ಉಪದೇಶ ಸಾಹಸ್ರಿ, ೨೦೧೫, ಅನು : ಸ್ವಾಮಿ ವಿಜ್ಞಾನಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು.

೫. ಅ. ಸುಂದರ, ೧೯೯೭, ಕರ್ನಾಟಕ ಪ್ರಾಗಿತಿಹಾಸಕಾಲದ ಕತೆ
ಪ್ರ. ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು-೫೬೦ ೦೦೨.

೬. ಕೆ.ವಿ. ಸುಬ್ರಹ್ಮಣ್ಯಂ, ೨೦೧೧, ಶಿಲಾಶ್ರಯ ಕಲೆಯ ದೃಶ್ಯಧ್ಯಾನ
ಪ್ರ. ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಕೆ.ವಿ. ಸುಬ್ರಹ್ಮಣ್ಯಂ, ೨೦೧೧, ಆದಿಮ ದೃಶ್ಯ ಸೌಂದರ್ಯದ ಆದಿಪತ್ಯ (ಟೇಕಲ್, ಘಟ್ಟಮಾದಮಂಗಲ ಮತ್ತು ಕಂಗುಂದಿ ಶಿಲಾಶ್ರಯ ಚಿತ್ರಗಳು)
ಪ್ರ. ಚಿತ್ರಕಾವ್ಯ ಪ್ರಕಾಶನ, ಬೆಂಗಳೂರು-೫೬೦ ೦೨೬.

೮. Zarnescu (1980) ಶಿಲ್ಪಿ ಬ್ರಾಂಕುಸಿಯ, ಹೇಳಿಕೆಗಳು ಮತ್ತು ಬರಹಗಳನ್ನೊಳಗೊಂಡ ಸಂಗ್ರಹ. ಪ್ರಕಾಶಕರು : Craiova


ಮೂಡುಬಿದರೆಯ
ಜೈನಮಠದ ಸಂಗ್ರಹದಲ್ಲಿರುವ
ತಾಳೇಗರಿಯ ಒಂದು ಚಿತ್ರ.
ಹೊಯ್ಸಳ ಕಾಲ.



**ಅನುಬಂಧಗಳು :**

**ಅನುಬಂಧ–1**

**ದೈವೀಕತೆ ಎಂದರೇನು?**

ದೈವೀಕತೆ ಎಂದರೇನು? ಎಂಬ ಪ್ರಶ್ನೆಗೆ ಅದೊಂದು ಹಳೆಯ ಕಾಲದ ಪದ ಎಂದು ಹೇಳಲಾಗುತ್ತದೆ ಯಾದರೂ ಅಕಾಡೆಮಿಕ್ ವಿವರಣೆಗಳಲ್ಲಿ ನಿರ್ದಿಷ್ಟವಾದ ಅರ್ಥ ಇಲ್ಲ. ಆದರೆ ಧರ್ಮ ಮತ್ತು ಧಾರ್ಮಿಕತೆಗಳೊಂದಿಗಿನ 'ದೈವೀಕತೆ'ಯ ಸಂಬಂಧವನ್ನು ಅಲ್ಲಗಳೆಯಲಾಗದು. ಪಾರಂಪರಿಕ ಧಾರ್ಮಿಕ ಪಠ್ಯಗಳಲ್ಲಿ ದೈವೀಕತೆಯು ಪುನರಾವರ್ತಿತಗೊಳ್ಳುತ್ತ ನಮ್ಮ ಸಮಕಾಲೀನ ಸಂದರ್ಭದಲ್ಲಿಯೂ ಹೆಚ್ಚಾಗಿ ಓದಿಸಿಕೊಳ್ಳುತ್ತಿದೆ. "ಯಾವುದೋ ಒಂದು ಅಗೋಚರ ಶಕ್ತಿ ನಮ್ಮನ್ನೆಲ್ಲ ನಡೆಸುತ್ತಿದೆ" ಎಂದು ಭಾವಿಸುವ ಬಹುಸಂಖ್ಯಾತ ಜನಸಮಾಜ ನಮ್ಮದು. ನಮ್ಮ ದೃಶ್ಯಕಲೆಯಲ್ಲಿ ಯಾವ ದೈವೀಕತೆಯು ಇದೆ.? ಎಂಬುದನ್ನು ಚಿಂತಿಸಿದವರು ಕಡಿಮೆ. ಬಹುತೇಕ ಜನದೂರ, ಐಹಿಕಸುಖೀ ವೈಭವೀ ಕಲಾವಿದ/ಕಲಾವಿದೆಯರು, ಕಲಾಚಿಂತಕರಲ್ಲಿ ನಮ್ಮ ಹಿಂದಿನ ಪಠ್ಯಗಳೇ ಅಲ್ಲದೆ ನಮ್ಮ ಸಂದರ್ಭದ ಪಠ್ಯಗಳಲ್ಲಿ ಇರುವ 'ದೈವೀಕ ಪ್ರವಾಹ' ಮತ್ತು ಬೌದ್ಧಿಕ/ಮನಃಶಾಸ್ತ್ರೀಯ ಬೋಧನೆಗಳೊಂದಿಗೆ ಬೆರಳೆಣಿಕೆಯ ಸಂಖ್ಯೆಯ ಕಲಾವಿದರು ಹತ್ತಿರವಾದರೆ, ಅಲ್ಪ ಸಂಬಂಧ ಸಾಧಿಸಿದವರೇ ಹೆಚ್ಚು. ಈ ಅಂತರ ಕಡಿಮೆಯಾಗುವ ಸಾಧ್ಯತೆಗಳು ಶಾಶ್ವತವಾಗಿ ಇಲ್ಲವಾಗಿಲ್ಲವಾದರೂ ಸದ್ಯಕ್ಕೆ ಇಲ್ಲ ಎಂದೇ ಹೇಳಬಹುದು.

ಪಶ್ಚಿಮದಲ್ಲಿ ೨೦ನೆಯ ಶತಮಾನ ಕಲೆಯಲ್ಲಿ Spirituality ಕಾಣಿಸಿ ಕೊಂಡಿತು. ಆಧುನಿಕ ಕಲೆಯ ಆಧ್ಯಾತ್ಮಿಕ ಇತಿಹಾಸವು ವಿಶಿಷ್ಟವಾಗಿಯೇ ತೆರೆದು ಕೊಂಡಿದೆ. ರಷ್ಯನ್ ಕಲಾವಿದ ವ್ಯಾಸಿಲಿ ಕ್ಯಾಂಡಿನಿಸ್ಕಿ ತನ್ನ On the spiritual in art ಬರಹದಲ್ಲಿ the things of the spirit ಎಂಬ ಮಾತುಗಳನ್ನು ಆಡುತ್ತಾನೆ. Malevich, Mark Rothko, Brancusi, Mandrian, Morris, Louis ಮೊದಲಾದವರು ಈ 'ಪರ' ಲೋಕದ, ಅನುಭವಾತೀತ ಅಥವಾ ಪಾರಮಾರ್ಥಿಕತೆಯ ಹೊಳಹುಗಳನ್ನು ತಮ್ಮದೇ ಆದ ರೀತಿಯಲ್ಲಿ ಬಿಂಬಿಸಲು ಯತ್ನಿಸಿದರು. ಜರ್ಮನಿಯ Bauhaus, ಆ ಸಂದರ್ಭದ ವಿನ್ಯಾಸೀ/Design ಮೂಲರೂಪೀ ಕಲಾ ಶಾಲೆಯೇ ಅಲ್ಲದೆ ಅಸಾಮಾನ್ಯ ಅನ್ವೇಷೀಕಲಾ ಶಿಕ್ಷಕರನ್ನೂ ಹೊಂದಿತ್ತು. ಕೆಲವರು ಮೆದುದನಿಯಲ್ಲಿ, ಪ್ರಾಯೋಗಿಕವಾಗಿ ಮತ್ತೆ ಹಲವರು ಆಡಂಬರದ, ಥಳುಕಿನ ಸಂತೆಯ ಗಲಾಟೆಯಂತೆ ಕಾಣಿಸಿಕೊಂಡರು. ದೈವೀಕತೆಯನ್ನು ಗಲಾಟೆಯಲ್ಲಿ ಗೋಚುವಯತ್ನ ಅವರದು. ಆದರೆ ಈ ಮೊದಲು ಹೇಳಿರುವಂತೆ ಕೆಲವರು ಅವರು ಏನು ಮಾಡಬೇಕೆಂದು ಕೊಂಡಿದ್ದರೋ ಅದನ್ನೇ ಮಾಡಿದರು; ಅವರಿಗೆ

ಸ್ಪಷ್ಟತೆ ಇದ್ದಿತು. 'Artistic form to spiritual meaning as they experienced it'........... 'There is no orthodox spirituality in this century' ಎಂದೂ ಹೇಳಲಾಗಿದೆ. ವಿಶೇಷವೆಂದರೆ ಈ ಆಧುನಿಕ ಸಂದರ್ಭದ ಅಲ್ಲಿನ ಜನರಿಗೆ ಆ ಸಂದರ್ಭದ ಕಲಾವಿದರ Spiritual aspect of the thought and work ಬಹುತೇಕ ಗ್ರಹಿಸಲು ಅಸಾಧ್ಯವಾದುದಾಗಿತ್ತು. ಈ ವೈರುಧ್ಯಮಯ ನಡೆಯ ನಡುವೆಯೇ ೨೦ನೆಯ ಶತಮಾನದ ಪಶ್ಚಿಮ ಮತ್ತು ಯೂರೋಪಿನ ಕಲೆಯು ದೈವೀಕ ದೃಶ್ಯ ಧ್ಯಾನವನ್ನೇ ತನ್ನ ನಿಜದ ನೆಲೆಯನ್ನಾಗಿಸಿಕೊಂಡಿತ್ತು.

ವಿಶ್ವ ಸಮರಗಳ ವಿನಾಶೀ ನಡೆಗಳ ನಡುವೆ ವಿಕೃತಗೊಂಡ ಸಮಾಜವು ವೈಜ್ಞಾನಿಕ ಮತ್ತು ಭೌತಿಕ ಅನುಕೂಲಗಳ ವೈಭವದಲ್ಲಿ ಮುಳಗಿದ್ದಿತು; ಆಧ್ಯಾತ್ಮಿಕತೆಗೆ ಬೆನ್ನು ತೋರಿತು. ವೃತ್ತಿಪರ ತತ್ವಶಾಸ್ತ್ರಿಗಳು, ಹೆಚ್ಚು ಕಲಿತವರೂ ಆ ನಡೆಯ ಮುಂಚೂಣಿಯಲ್ಲಿ ಕಾಣಿಸಿಕೊಂಡರು. ಅಂದರೆ ಇವರೆಲ್ಲ Metaphysics ಎಂದರೆ ಸವಕಲು ನಾಣ್ಯ ಎಂಬಂತೆ ಕಂಡರು. ಆದಾಗ್ಯೂ ಈ ಮೊದಲೇ ಉಲ್ಲೇಖಿಸಿರುವ ಹಲವು ಕಲಾವಿದರು ತಮ್ಮ ಕಲೆಯನ್ನು ಅನ್ವೇಷಣೆಯ ಹಾದಿಯನ್ನಾಗಿಸಿಕೊಂಡರು. ಕೇವಲ 'ರೂಪ' ಮತ್ತು 'ಅನನ್ಯತೆ' ಹುಡುಕಾಟ ಮಾತ್ರವಲ್ಲದೆ ಅನುಭವದ ಆಳದ ಬಗೆಯುವಿಕೆಯ ಜತೆ ಜತೆಗೇ ತೀಕ್ಷ್ಣದೃಷ್ಟಿಯ ಒಳನೋಟದ ಅನ್ವೇಷೀ ಮನಸ್ಥಿತಿಯೂ ಆಗಿತ್ತು. ಕ್ಯಾಂಡಿನಿಸ್ಕಿ ಇದನ್ನೇ Inner Sound ಅಂದದ್ದು. ಅವನ ಹಲವು ಕಲಾಕೃತಿಗಳು 'Culminated in poetic images of a universe sacred or almost sacred alive with gorgeous colour and stately motion' ನಂತೆ ಇದ್ದವು. ಬ್ರಾಂಕುಸಿಯು ತನ್ನ ಅಭಿವ್ಯಕ್ತಿಯಲ್ಲಿ ಅಚ್ಚರಿಗೊಳಿಸುವ ಸರಳತೆಯೊಂದಿಗೆ ಮಾಯೆಯಂತಹ ಸತ್ವವನ್ನು ಮೂರ್ತಿಕರಿಸುವ ಪ್ರಯತ್ನಗಳನ್ನು ಮಾಡಿದರೆ, ಮಾಂಡ್ರಿಯನ್ ಕೃತಿಗಳಲ್ಲಿ Accidental appearances ನ ವಿಶ್ವದಿಂದ ಬಿಡುಗಡೆಗೊಳ್ಳುವ ಆಶಯ ತೋರಿದನು; The universal that towers above us ಗ್ರಹಿಸಲ್ಪಟ್ಟಿತು. ಪರದೇಶೀ ಶಿಲ್ಪಿ ಕಾನ್‌ಸ್ಟಾಂಟಿನ್ ಬ್ರಾಂಕುಸಿ ೧೯೨೬ರಲ್ಲಿಯೇ ದೈವೀಕತೆಯನ್ನು ಅರಗಿಸಿಕೊಂಡು 'An art of our own' ಎಂದು ಹೇಳಿದ್ದುಂಟು. ಮುಂದುವರಿದು ಅವನು 'Every thing-animate or in animate has a spirit......... I must express the spirit of the subject. The spirit will be alive forever. or if you wish, the idea of the subject : that which never dies. It grows in the viewer like life from life........ I reached the point where I could draw out of bronze, wood, or marble that hidden diamond, the essential.' ಎಂದು ಹೇಳಿದ್ದಾನೆ. ೧೫ನೆಯ ಶತಮಾನದ ಟಿಬೇಟ್‌ನ ಬೌದ್ಧ

ಭಿಕ್ಷು ಮಿಲರೇಪನ ಕುರಿತು ಹೆಚ್ಚು ಆಸಕ್ತನಾಗಿದ್ದ ಬ್ರಾಂಕುಸಿಯು ೧೯೩೦ರ ಹೊತ್ತಿಗೆ ಬೌದ್ಧ ತತ್ವವು ಒಂದು ಧರ್ಮವಲ್ಲ "It is a morality and a technique through which one can come closer to the gods. Buddhism is my morality. I have neglected the technique" ಎಂದು ಹೇಳಿಕೊಂಡಿದ್ದನು. ಭಾರತಕ್ಕೂ ಕಲಾ ಪೋಷಕರೊಬ್ಬರ ಆಹ್ವಾನದಂತೆ Temple of love ಅಥವಾ Temple of deliverance ಸೃಷ್ಟಿಸಲು ಹಲವು ಭೇಟಿಗಳು ನಡೆದವು; ಸೃಷ್ಟಿಯು ರೂಪುಗೊಳ್ಳಲಿಲ್ಲ. ಬ್ರಾಂಕುಸಿಯ ಒಮ್ಮೆ The humblest being is capable of finding the way to god....... we cannot ever reach god, but the courage to travel toward him remains important ಎಂದೂ ಹೇಳಿಕೊಂಡಿದ್ದಾನೆ. ಇಲ್ಲೆಲ್ಲಾ ಕಲೆಯಲ್ಲಿ ದೈವೀಕತೆಯ ಆದಿಪತ್ಯ ಇದೆಯೇ? ಎಂಬ ಪ್ರಶ್ನೆಯ ಉತ್ತರದಲ್ಲಿ ಸೂಕ್ಷ್ಮ ಒಳನೋಟಗಳ ದರ್ಶನ ಸಾಧ್ಯ. ಭಾರತೀಯ ಕಲೆಯ ತಾತ್ವಿಕತೆಯ ಆತ್ಮವೂ ಇದೇ ಆಗಿದೆ.

೨೦ನೆಯ ಶತಮಾನದ ದೃಶ್ಯ ಕಲೆಗೆ ದೈವೀಕತೆಯ ನಂಟು ಬೆಸೆದ ವ್ಯಾಸಿಲಿ ಕ್ಯಾಂಡಿನಿಸ್ಕಿ On the spiritual in art ದೃಷ್ಟಿಯ ವಿಶಿಷ್ಟ ತಾತ್ವಿಕ ನೋಟಗಳಿಂದಾಗಿಯೂ ವಿಖ್ಯಾತನು. "but only their innersound, their life.........the world sounds. It is a cosmos of spiritually active beings. Even dead matter is living spirit" ಎಂಬ ಅನುಭಾವಿ ಅವನು. ಅವನೇ ಒಮ್ಮೆ ಹೇಳಿರುವ "The artist works not to earn praise and admiration, or to avoid blame or hatred, but rather obeys that categorically imperative voice, which is the voice of the lord, before whom he must humble him-self and whose servant he is." ಎಂಬ ವಿಶಿಷ್ಟ ಮಾತುಗಳು ನಮ್ಮ ಪರಂಪರೆಯ ಕರಕುಶಲಿಗರು, ಶಿಲ್ಪಿ, ಚಿತ್ರಕಾರರನ್ನು ನೆನಪು ಮಾಡುತ್ತವೆ. ಹೀಗಾಗಿಯೇ ನಮ್ಮವರು ಹಿಂದೆ ತಮ್ಮ ಸಹಿಯನ್ನು ಮಾಡುತ್ತಿರಲಿಲ್ಲ. "Same thing alse" ಪ್ರಭಾವದಿಂದ ಶಿಲ್ಪಗಳು ಸೃಷ್ಟಿಯಾಗುತ್ತವೆ. ನಮ್ಮಿಂದ ಅಲ್ಲ ಎಂದೇ ನಮ್ಮವರು ಚಿಂತಿಸುತ್ತಿದ್ದರು. ಪಾಲ್‌ಕ್ಲೀ ದೃಷ್ಟಿಯ ಕಲಾವಿದರು."...... not only do they more or less revitalize the visible, but they also make secret visions visible" ನಂತೆ ಅಭಿವ್ಯಕ್ತಿಸುತ್ತಾರೆ. ಹೆನ್ರಿಮೂರ್, ಮೋರಿಸ್ ಲೂಯಿಸ್, ಛಾಯಾಚಿತ್ರಕಾರ ಆಲ್‌ಫ್ರೆಡ್ ಸ್ಟೈಗ್‌ಲಿಟ್ಝ್, ಶೂನ್ಯ ಅವಕಾಶವನ್ನು (Space) ಅರಗಿಸಿಕೊಂಡು ಅಭಿವ್ಯಕ್ತಿಸಿದ ವೈವೆಸ್ ಕ್ಲೈನ್ ಮೊದಲಾದವರೂ ಮೇಲಿನ ಹಿನ್ನೆಲೆಯಲ್ಲಿ ನೆನಪಾಗುತ್ತಾರೆ.

ಜಾನ್ ಬರ್ಜರ್‌ನ ದೃಷ್ಟಿಯಲ್ಲಿ ಯಾವುದೇ Quoted by publicity ಯ ಕಲಾಕೃತಿಗೆ ಸಂಬಂಧಿಸಿದಂತೆ ಇರುವ ಎರಡು ಉದ್ದೇಶಗಳು. "........Art is a sign of off luence; it belongs to the good life, it is part of the furnishing which the world gives to the rich and the world gives to the rich and the beautiful, But a work of art also suggests a cultural authority, a form of dignity, even of wisdom, which is superior to any vulgar, material interest; an oil painting belongs to the cultural heritage; it is a reminder of what it means to be a cultivated european. And so the quoted work of art.... says two almost contradictory things at the same time ; it denotes wealth and spirituality ; it implies that the purchase being proposed is both a luxury and a cultural value."

- John Berger, 1977,
ways of seeing, P-135, Pub : British Broad casting corporation and penguin books.

ಹೆಗಲ್ (ಕ್ರಿ.ಶ. ೧೭೭೦-೧೮೩೧)

Spirit alienating or expressing itself in culture. Art or what Hegel entitles, 'Religion in the form of Art' with a treatment of cults, and of the spiritual work of art". ಕಾಂಟ್‌ನ Critical Philosophy ಯು ಸತ್ಯ, ಶಿವ (Good) ಮತ್ತು ಸುಂದರಗಳನ್ನು ಅನ್ವೇಷಿಸುವ ಹಾದಿಯದು.

**ಅನುಬಂಧ-2.**

## ಭವ್ಯತೆ ದೈವೀಕತೆ ದೃಶ್ಯತೇ

ಪಶ್ಚಿಮ ಹಾಗೂ ಯೂರೋಪುಗಳಲ್ಲಿಯೂ Sublime ಬಗೆಗಿನ ಕುತೂಹಲ, ಚಿಂತನೆಗಳು ಪ್ರಕಟವಾಗಿವೆ. ಕ್ರಿ.ಶ. ಮೊದಲನೆಯ ಶತಮಾನದಲ್ಲಿ Longinus ನ on the sublime, ಕ್ರಿ.ಶ. ೧೭೫೬ ರಲ್ಲಿ Edmund Burk ನ Philosophical Enquiry into the origin of our ideas on the sublime and beautiful ಪ್ರಕಟವಾಯಿತು. ೧೭೭೩ರಲ್ಲಿ ಜರ್ಮನಿ ಭಾಷೆಗೆ ಅನುವಾದಗೊಂಡಿತು; Immanuel kant ನ early observations on the feeling of the beautiful and sublime, ೧೭೭೩ರಲ್ಲಿ, ಹಾಗೆಯೇ ಅವನ Critique of Judgement (೧೭೯೦)ನ ೨೩ರಿಂದ ೨೯ನೆಯ ಭಾಗಗಳ "The Analytic of the sublime" ವಿವರಗಳನ್ನು ಹೊರಗಿನವರ ನೋಟಗಳಿಗಾಗಿ ನೋಡಬಹುದು. ಆದರೆ ಚೀನಾ, ಜಪಾನ್,

ಮತ್ತು ಭಾರತಗಳ ದೈವೀಕ ದೃಷ್ಟಿಯ ಒಳ ನೋಟಗಳು ಬಹುತೇಕ ಒಂದೇ ಆಗಿವೆ. ನಮ್ಮ ಪೌರ್ವಾತ್ಯ ಪರಂಪರೆಯಲ್ಲಿ ಪುರಾಣಗಳ ಪಾತ್ರ, ಪ್ರಭಾವ, ಗಣನೀಯ ಆದರೆ ಪಶ್ಚಿಮ ಮತ್ತು ಯೂರೋಪಿನ ಸಂದರ್ಭದಲ್ಲಿ ನಮಗಿರುವ ಪಾರಂಪರಿಕ ಪೌರಾಣಿಕ ಆಯಾಮಗಳ ಕೊರತೆ ಇರುವಂತಿದೆ. ಹಾಗಾಗಿಯೇ Barnett newman "The question that now arises is how if we are living in a time without legend or mythos that can be called sublime, if we refuse to admit any exaltations in pure relation, if we refuse to live in the abstract, how can we be creating a sublime art?" ಎಂದದ್ದು. ಆದರೆ, Friedrich nietzshe "every thing that is good is light, what is divine, runs on delicate feet" ಎನ್ನುತ್ತಾನೆ. ಹಾಗೆಯೇ ನಮ್ಮ ಪರಂಪರೆಯ ನೋಟಗಳಿಗೆ ಪೂರಕವಾಗಿಯೇ ಪಶ್ಚಿಮ ಹಾಗೂ ಯೂರೋಪುಗಳ ಪ್ಲೇಟೋ, ಸಂತ ಆಂಬ್ರೋಸ್, ಸಂತ ಥಾಮಸ್ ಅಖಿನಾಸ್, ಸಂತ ಅಗಸ್ಟೈನ್, ಎಕ್ಹಾರ್ಟ್ ಮೊದಲಾದವರನ್ನು ಆನಂದ ಕೆ. ಕುಮಾರ ಸ್ವಾಮಿಯವರು ಉಲ್ಲೇಖಿಸುತ್ತಾರೆ. ವಿವರಗಳಿಗೆ ಅವರ 'Christian and oriental philosophy of Art' ನ ಅಧ್ಯಾಯಗಳನ್ನು ಗಮನಿಸಬಹುದು. ಎಕ್ಹಾರ್ಟ್ ಹೇಳುವ "ಅವನಿಂದಲೇ ಎಲ್ಲ ವಸ್ತುಗಳೂ ಮಾಡಲ್ಪಡುತ್ತವೆ." ಎಂಬ ಮಾತುಗಳೊಂದಿಗೆ My eye and Gods eye, that is one eye and one vision, one knowledge and one love ಎಂಬ ನೋಟವು ಗಮನಾರ್ಹ. ಸಂತ ಅಗಸ್ಟೈನ್‌ನ "Holding the world in his mind and forming it in to his image" ಎಂಬ ನೋಟ ಹಾಗೂ

ಶಂಕರಾಚಾರ್ಯರ (?)
'ದೃಗ್ ದೃಶ್ಯ ವಿವೇಕ'ದ

ರೂಪಂ ದೃಶ್ಯಂ ಲೋಚನಂ ದೃಕ್ ತದ್ದೃಶ್ಯಂ ದೃಕ್ತುಮಾನಸಮ್
ದೃಶ್ಯಾಧೀವೃತ್ತಯಃ ಸಾಕ್ಷೀ ದೃಗೇವನತು ದೃಶ್ಯತೇ ॥೧॥

ನೀಲ ಪೀತಸ್ಥೂಲ ಸೂಕ್ಷ್ಮಹ್ರಸ್ವ ದೀರ್ಘಾದಿಭೇದಿತಃ
ನಾನಾ ವಿದಾನಿ ರೂಪಾಣಿ ಪಶ್ಯೇಲ್ಲೋಚನಮೇಕಧಾ ॥೨॥

ಎಂಬ ಅಂಶಗಳನ್ನೂ ಗಮನಿಸಬಹುದು.

# 2. ಸ್ವಾತಂತ್ರ್ಯ ಪೂರ್ವದ ದೈವೀಕ ದೃಶ್ಯಧ್ಯಾನ

**(ಸು: ಕ್ರಿ.ಶ. 18–19ನೆಯ ಶತಮಾನ)**

ನಮ್ಮ ಸ್ವಾತಂತ್ರ್ಯ ಪೂರ್ವ ಸಂದರ್ಭದಲ್ಲಿ ಪರಂಪರೆಯಿಂದ ಬಂದ ವೈದಿಕ ಮತ್ತು ಪುರಾಣಗಳ ದೃಶ್ಯಲೋಕವೇ ಆವರಿಸಿದ್ದಿತು. ಬಹುತೇಕ ಧರ್ಮ ಮೂಲದ ದೈವೀಕ ದೃಶ್ಯಧ್ಯಾನದಂತಹ ಪ್ರಜ್ಞಾಪ್ರವಾಹೀ ಕಲಾ ಸೃಷ್ಟಿಗಳೇ ಮೂಡಿ ಬರುತ್ತಿದ್ದ ಸಂದರ್ಭ ಅದು. ಜತೆಜತೆಗೇ ದೇಶೀ ಸಾಮರಸ್ಯದ ದರ್ಶನಧಾರೆ. ಶರಣ ಸಂತ, ಮಹಾಂತ, ಸೂಫಿ, ಅವಧೂತ ಪರಂಪರೆಯ ಮೂಲಬೇರಿಗೆ ಅಂಟಿಕೊಂಡೇ ಮಾನವೀಯತೆಯ ಮಹತ್ತಾದ ಅರಿವಿನತ್ತ ಪಯಣಿಸಿದವರು ಹಲವರು. ಮನುಷ್ಯನ ಪ್ರಭಾವದ ಉದಾತ್ತತೆ ಮತ್ತು ನೀಚತನ, ದೈವೀಪ್ರೇಮ ಮತ್ತು ದಿವ್ಯಸ್ನೇಹಗಳೇ ಅಲ್ಲದೆ ಪೈಶಾಚಿಕ ದ್ವೇಷಗಳಂತಹ ವೈರುಧ್ಯಮಯ ಸಂವೇದನೆಗಳನ್ನು ದೃಶ್ಯಕಲೆಯು ಸೂಕ್ಷ್ಮಗೊಳಿಸಿದೆ; ಮನುಷ್ಯತ್ವವನ್ನು ದರ್ಶಿಸಿದೆ. ದೃಶ್ಯಕಲಾ ಸೃಷ್ಟಿಯು ಶತಮಾನಗಳ ಹಿಂದೆಯೇ ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಹೊಣೆಗಾರಿಕೆಯಿಂದ ಕಾಣಿಸಿಕೊಂಡಿದೆ. ಬಹುತೇಕ ಇತಿಹಾಸ ಕಾಲದ ಅರಸರ ಪೋಷಣೆಯ ಸಂದರ್ಭದ ಕಲಾವಿದರೇ ಅಲ್ಲದೆ ೧೮ನೆಯ ಶತಮಾನದ ಸ್ವಾತಂತ್ರ ಪೂರ್ವ ಹಲವಾರು ಕಲಾವಿದ, ಕಲಾವಿದೆಯರು ಈ ಹಿನ್ನೆಲೆಯಲ್ಲಿ ಕಾಣುತ್ತಾರೆ; ಶಿವಮೊಗ್ಗದ ತಿಪ್ಪಾಜಪ್ಪ, ಸುರಪುರದ ಗರುಡಾದ್ರಿ ಕುಟುಂಬದ ಬಾನಯ್ಯ, ವೆಂಕಟಯ್ಯ, ಬೆನಕಯ್ಯ ಮೊದಲಾದವರು. ಮಾಲೂರು ಸಂಜಾತ, ಮೈಸೂರು ಅರಸರ ಸಂದರ್ಭದ ಸಂತ ಶುಭರಾಯರು, ಶ್ರೀತತ್ವ ನಿಧಿ ಖ್ಯಾತಿಯ ಯಲ್ಲಯ್ಯ, ವೀರಣ್ಣ, ಸುಂದರಯ್ಯ ಜಾವಗಲ್ಲು ನರಸಿಂಹಯ್ಯ ನುಗುವನಹಳ್ಳಿ ನಾರಾಯಣಪ್ಪ, ದುರ್ಗದ ಕೃಷ್ಣಪ್ಪ, ತಿರುಪಳ್ಳಯ್ಯ ರಾಜು, ಕೆ.ವೆಂಕಟಪ್ಪ, ಸಿದ್ಧಲಿಂಗಸ್ವಾಮಿ, ಸ್ತಪತಿ, ವೆ. ಸುಬ್ರಹ್ಮಣ್ಯರಾಜು ಮೊದಲಾದವರ ಧ್ಯಾನಸ್ಥ ಮೂಲದ ದೃಶ್ಯಕಲೆಯ ಹಲವು ನೆಲೆಗಳ ಅಭಿವ್ಯಕ್ತಿಯು ದೈವೀಕತೆಗೆ ಅರ್ಪಿಸಿಕೊಂಡದ್ದೇ ಆಗಿದ್ದಿತು.



ಕಮತಗಿಯ ರಥದ ಅಲಂಕಾರದ ಒಂದು ವರ್ಣ ಚಿತ್ರ.
ಕಾಲ : ೧೮ನೇ ಶತಮಾನ



ಕಿನ್ನಾಳದ ವೇಣುಗೋಪಾಲನ ರೇಖಾಕೃತಿ



ಶ್ರವಣ ಬೆಳಗೊಳದ ಜೈನ ಮಠದ
ಒಂದು ಭಿತ್ತಿ ಚಿತ್ರ. ಕಾಲ: ೧೮ನೆಯ ಶತಮಾನ
ಮುಮ್ಮಡಿ ಕೃಷ್ಣರಾಜ ಒಡೆಯರ ಸಂದರ್ಭ.



ನಾಗೇಂದ್ರ
ಸ್ಥಪತಿಯವರ ಒಂದು
ಪ್ರಿಂಟ್.



ಮೈಸೂರು ಶೈಲಿಯ ಒಂದು ರೇಖಾಚಿತ್ರ



ಕೆ. ವೆಂಕಟಪ್ಪನವರ 'ಅರ್ಧನಾರೀಶ್ವರ' ರೇಖಾಚಿತ್ರ.



ಮೈಸೂರು ಅರಮನೆಯ ದಿ॥ ಶ್ರೀಕಂಠದತ್ತ ಒಡೆಯರ್‌ರವರ ಸಂಗ್ರಹದಲ್ಲಿದ್ದ ಮೈಸೂರು ಶೈಲಿಯ ಕೃತಿಗಳು. ಮೊದಲನೆಯ ಚಿತ್ರದಲ್ಲಿ ಮೈಸೂರಿಗೆ ಕ್ಯಾಮರಾ ಬಂದ ಸಂದರ್ಭವನ್ನು ಅಂದಿನ ಚಿತ್ರಕಾರರು ದುಡಿಸಿಕೊಂಡಿರುವ ಜಾಣತನವನ್ನು ನಾವು ಗಮನಿಸಬಹುದು.







ನಾಗೇಂದ್ರ ಸ್ಥಪತಿಯವರ 'ವರಲಕ್ಷ್ಮೀದೇವಿ'
ಒಂದು ಪ್ರಿಂಟ್. ೧೯ನೆಯ ಶತಮಾನ.



ಎಸ್. ಎನ್. ಸ್ಥಪತಿಯವರ 'ಪಳನಿದೇವ'.



೧೯ನೆಯ ಶತಮಾನದ ಒಂದು ಪ್ರಿಂಟ್.



ನಂಜನಗೂಡು
ದೇವಾಲಯದ ಗಾರೆ ಶಿಲ್ಪ.
'ಲಿಂಗೋದ್ಭವ ಮೂರ್ತಿ',
ಮುಮ್ಮಡಿ ಕೃಷ್ಣರಾಜ
ಒಡೆಯರ ಕಾಲ.



'ಶ್ರೀ ಶಾರದಾ', ಬೆಂಗಳೂರಿನ
ಅವಿನ್ಯೂ ರಸ್ತೆಯ ನಂದೀಶ್ವರ
ಫ್ರೇಮ್‌ವರ್ಕ್ಸ್, ನಂ : ೨೦೩,
ಯಜಮಾನ್ ಅಂಡ್ ಸನ್ಸ್
ಫೋಟೋ ಬ್ಲಾಕ್ ಮೇಕರ್ಸ್.

## ಸಂತ ಚಿತ್ರಕಾರ : ಶುಭರಾಯ

ಚಿತ್ರಕೃತಿಗಳ ಮೂಲಕ ದೈವವನ್ನು ಆರಾಧಿಸಿದ ಅಪರೂಪದ ಕಲಾವಿದ ಶುಭರಾಯ; ಮೂಲ ಹೆಸರು ಸುಬ್ಬರಾಯ. ಕೋಲಾರ ಜಿಲ್ಲೆಯ ಮಾಲೂರಿನ ಶುಭರಾಯ (ಕ್ರಿ.ಶ. ೧೭೫೦–೧೮೨೦) ಸಹಜವಾಗಿಯೇ ಕನ್ನಡ, ತೆಲುಗು, ತಮಿಳು, ಉರ್ದು ಹಾಗೂ ಮರಾಠಿ ಭಾಷೆಗಳನ್ನು ಬಲ್ಲವರಾಗಿದ್ದರು. ಆಗಿನ ಮೈಸೂರು ಸಂಸ್ಥಾನದಲ್ಲಿ ಟಿಪ್ಪುಸುಲ್ತಾನ್ ಬಳಿ ಪೇಶ್ವೆಗಾರರಾಗಿದ್ದುದರಿಂದ ಉರ್ದು–ಮರಾಠಿ ಭಾಷೆಗಳ ಅಭ್ಯಾಸ ಚೆನ್ನಾಗಿದ್ದಿತು. ಟಿಪ್ಪು ಆಳ್ವಿಕೆಯ ಸಂದರ್ಭದಲ್ಲಿ ಶ್ರೀರಂಗ ಪಟ್ಟಣದಲ್ಲಿದ್ದ ಶುಭರಾಯರಿಗೆ, ಆ ಹೊತ್ತಿಗೆ ಅಲ್ಲಿನ ಚಿತ್ರಗಾರರ ಸಂಪರ್ಕದಿಂದ ಮೈಸೂರು ಶೈಲಿಯಲ್ಲಿ ಚಿತ್ರಿಸುವ ಅಲ್ಪ ಸ್ವಲ್ಪ ಅಭ್ಯಾಸವು ಆಗಿರಬಹುದು. ಕರ್ನಾಟಕದ ಸುಬ್ಬರಾಯ ಮಹಾರಾಷ್ಟ್ರದಲ್ಲಿ ನೆಲೆಸಿದ ನಂತರ ಮರಾಠಿ ಪ್ರಭಾವದಿಂದ ಶುಭರಾಯ ಆಗಿರಬಹುದೆಂದು ಊಹಿಸಲಾಗಿದೆ. ಶುಭರಾಯರನ್ನು ಸಂತನಂತೆ ನೋಡಲಾಗಿದೆ. ವಿಶಿಷ್ಟ ರಾಜಕೀಯ ಸಂದರ್ಭಗಳ ಹಿನ್ನೆಲೆಯಲ್ಲಿ ಶ್ರೀರಂಗ ಪಟ್ಟಣ ತೊರೆದು ಸೊಲ್ಲಾಪುರದಲ್ಲಿ ಮಠವೊಂದನ್ನು ಕಟ್ಟಿಕೊಂಡು ದೇವರ ಸೇವೆಯಲ್ಲಿ ಶುಭರಾಯ ತೊಡಗಿಕೊಂಡದ್ದು ಆಳದಲ್ಲಿ ನಿಗೂಢವಾಗಿಯೇ ಕಂಡರೂ, ಹೊರಗೆ ದೇವ ದೇವಿಯರ ಚಿತ್ರಗಳನ್ನು ಚಿತ್ರಿಸುತ್ತ, ಪೂಜಿಸುತ್ತಲೇ ಕಾಲ ಕಳೆದಂತೆ ಕಾಣುತ್ತದೆ. ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಮೂಲದ ಚಿತ್ರಗಳು ಅವು.

ಶುಭರಾಯರನ್ನು ಸಂತ, ಕವಿ, ಚಿತ್ರಕಾರ ಎಂದೆಲ್ಲಾ ಅಭಿವರ್ಣಿಸಲಾಗಿದೆ[೧]. ಚಿತ್ರಗಳ ಮೂಲಕ ದೇವರನ್ನು ಆರಾಧಿಸಿದವರಲ್ಲಿ ಶುಭರಾಯರು ಮೊದಲಿಗರಿರ



ಮೈಸೂರಿನ ೧೯ನೆಯ ಶತಮಾನದ ರೇಖಾಚಿತ್ರ : 'ವಿಶ್ವರೂಪ ದರ್ಶನ'. ಛಾಯಾಚಿತ್ರ.

ಮಾಲೂರಿನ ಸಂತ
ಶುಭರಾಯರ
ಒಂದು ವರ್ಣ ಚಿತ್ರ.
ಮಾಧ್ಯಮ :
ಮಣ್ಣಿನ ಬಣ್ಣಗಳು.
೧೯ನೆಯ ಶತಮಾನ.



ಮೈಸೂರು ಶೈಲಿಯ
ಒಂದು ಕೃತಿ.
೧೯ನೆಯ ಶತಮಾನ.



ಸಿದ್ಧಲಿಂಗ ಸ್ವಾಮಿಯವರ 'ಬುದ್ಧ', ಹತ್ತುತಾಲ ದೊಡ್ಡದು, ಮಾಧ್ಯಮ : ಜಲವರ್ಣ



ಮೈಸೂರು ಅರಮನೆಯ
ದಿ॥ ಶ್ರೀಕಂಠದತ್ತ ಒಡೆಯರ್‌ರವರ
ಸಂಗ್ರಹದಲ್ಲಿದ್ದ ಮೈಸೂರು
ಶೈಲಿಯ ಕೃತಿಗಳು.





೧೮ನೆಯ ಶತಮಾನದ
ತೊಗಲುಗೊಂಬೆ.
'ಕಾಮಧೇನು'.








ಸಿ.ಎನ್. ಪಾಟೀಲ್‌ರವರ
'ಜಗಜ್ಯೋತಿ ಶ್ರೀ ಬಸವೇಶ್ವರ',
ಕಬಾಡಿ ಸ್ಟೋರ್ಸ್, ಗದಗ.



ಗದಗನ ಕಬಾಡಿ ಸ್ಟೋರ್ಸ್‌ನ
ಒಂದು ಪ್ರಿಂಟ್.

ವಿ.ಟಿ. ಕಾಳೆಯವರ
ಯಡಿಯೂರು
ಸಿದ್ಧಲಿಂಗೇಶ್ವರರ ಒಂದು
ಪ್ರಿಂಟ್. ೧೯ನೆಯ
ಶತಮಾನ.





ಬಹುದು ಎಂಬ ಅಚ್ಚರಿಯನ್ನೂ ಕನ್ನಡದ ಕಲಾ ಇತಿಹಾಸಕಾರರು ವ್ಯಕ್ತಪಡಿಸಿದ್ದಾರೆ. ಶುಭರಾಯರೊಳಗಿನ ಆಧ್ಯಾತ್ಮಿಕ ದಾಹವೇ ಅವರನ್ನು ರಾಜ್ಯದ ಗಡಿಭಾಗವಾದ ಸೊಲ್ಲಾಪುರದ ಹೊರ ವಲಯದ ಪಡಫಾಚಿಮಳ ಎಂಬ ತೋಟಕ್ಕೆ ಸೇರಿಸಿರಬೇಕು. ಅಲ್ಲಿಯೇ ನೆಲೆಸಿ ಇಷ್ಟದೈವ ಮಾರುತಿಯ ಧ್ಯಾನದಲ್ಲಿ ಮುಳುಗಿ, ಅಲ್ಲಿಯೇ ಮಠವೂ ಕಟ್ಟಲ್ಪಟ್ಟು ಸತ್ಪುರುಷ ಸಂತರೆಂದು ಖ್ಯಾತರಾದರು. ಚಂದ್ರಭಾಗಾ ನದಿಯಲ್ಲಿ ಇದ್ದ ವಿಠಲ ಮೂರ್ತಿಯನ್ನು ತಂದು, ಪ್ರತಿಷ್ಠಾಪಿಸಿ ಪೂಜಿಸುವ ಪರಂಪರೆಯನ್ನು ಪ್ರಾರಂಭಿಸಿದರು.

ಬಹುತೇಕ ರಾಮಾಯಣ ಮಹಾಭಾರತ ಅದರಲ್ಲಿಯೂ ಕೃಷ್ಣನಿಗೆ ಸಂಬಂಧಿಸಿದ ವಿವಿಧ ಸಂದರ್ಭಗಳು ಶುಭರಾಯರಿಂದ ಚಿತ್ರಿತಗೊಂಡಿವೆ. ದೈವೀಕ ಪ್ರೀತಿಯ ಧ್ಯಾನಕ್ಕೆ ದೇವ-ದೇವಿಯ ಚಿತ್ರಗಳನ್ನು ಶುಭರಾಯರು ದುಡಿಸಿಕೊಂಡಿರು ವುದು ಅವರ ಭಕ್ತಿಯ ಪರಾಕಾಷ್ಠೆಯನ್ನು ಬಿಂಬಿಸುತ್ತದೆ.

ಮಠದಲ್ಲಿಯೇ ಉಳಿದುಕೊಂಡು, ಗಿಡಮೂಲಿಕೆಗಳ ಬಣ್ಣಗಳಿಂದ ಚಿತ್ರಿಸುತ್ತ ದೈವೀಕ ರಸಮಯ ಸಂದರ್ಭಗಳ ದೈವೀಕ ಆನಂದವನ್ನು ಶುಭರಾಯರು ಅನುಭವಿಸಿದ್ದಾರೆ. ದಶಅವತಾರಗಳು, ರಾಧಾಕೃಷ್ಣರ ಕಾಲ-ದೇಶ ಮೀರಿದ ದೈವೀಕ ಪ್ರಣಯ, ರಾಸಲೀಲೆ, ಬುದ್ಧ ಇತ್ಯಾದಿ ದೃಶ್ಯಲೋಕಗಳ ನಮ್ಮ ಪರಂಪರೆಯ ಚಿತ್ರಣ ಪ್ರಕ್ರಿಯೆಯು ಆನಂದಕುಮಾರ ಸ್ವಾಮಿಯವರು ಅವರ Dance of Shiva[2] ದೀರ್ಘ ಬರಹದಲ್ಲಿ ಹೇಳಿರುವ Yoga of Art ದೃಷ್ಟಿಯನ್ನು ನೆನಪಿಸುತ್ತದೆ. ಹಾಗೆಯೇ ಕಲೆಯ ಅದ್ವೈತವನ್ನು ಸಾರುತ್ತದೆ. ಅಂದರೆ ಶುಭರಾಯರ ಚಿತ್ರಕೃತಿಗಳು ಕಲೆ ಮತ್ತು ಅದು ನೀಡುವ ಸೌಂದರ್ಯಾತ್ಮಕ ಅನುಭವಗಳು ಏಕೀಭವಿಸಿರುವ ಪರಸ್ಪರವನ್ನು ತೋರುತ್ತವೆ. ಕಲಾವಿದ, ಕಲಾಕೃತಿ ಮತ್ತು ರಸಿಕರ ಬಿಗಿಯಪ್ಪುಗೆಯಂತಹ ಸಂದರ್ಭ ಸೃಷ್ಟಿ ಅದು. ಶುಭರಾಯರ ಇಡೀ ಕಲಾ ಸೃಷ್ಟಿಯು ದೈವೀಕ ದೃಶ್ಯ ಕಲೆಯಧ್ಯಾನದ ಪರಂಪರೆಯನ್ನು ಸಶಕ್ತವಾಗಿ ಬಿಂಬಿಸುತ್ತದೆ. ಅರವಿಂದರ "The whole basis of Indian artistic creation is directly spiritual and intuitive and its highest business is to disclose something of the self, the infinite, the Divine...... idea, image, emotion of the spirit,"[೩] ಎಂಬ ಮಾತುಗಳೂ ಶುಭರಾಯ ರಂತಹವರ ಕಲೆಯ ಅಭಿವ್ಯಕ್ತಿಯ ಸಂದರ್ಭದಲ್ಲಿ ನೆನಪಾಗುತ್ತವೆ. ಪತಂಜಲಿಯ ಯೋಗಸೂತ್ರ, ತಂತ್ರಗಳ ತಾತ್ವಿಕತೆಯನ್ನು ತಮ್ಮ ದೈವೀಕ ಸೃಷ್ಟಿ ಶೀಲತೆಗಾಗಿ ಅರಗಿಸಿಕೊಂಡಿರುವಂತೆಯೂ ಇಂತಹ ಕಲಾವಿದರು ಕಂಡುಬರುತ್ತಾರೆ. ಶುಭರಾಯರ ಇಡೀ ಚಿತ್ರಸೃಷ್ಟಿಯಲ್ಲಿ ಕೆಲವೇ ಬಣ್ಣಗಳಲ್ಲಿ ಶಾಂತ, ಅರ್ಪಣಾ ಭಾವಗಳೇ ಅಲ್ಲದೆ ಸಖ್ಯ, ವಾತ್ಸಲ್ಯ ಮತ್ತು ಮಾಧುರ್ಯತೆಗಳೂ ಘನೀಭವಿಸಿವೆ; ದೈವೀಕತೆಯು ಅಲಂಕರಿಸಿಕೊಂಡಿದೆ.



ವಿ.ಟಿ. ಕಾಳೆಯವರ 'ವೀರಭದ್ರ'. ೧೯ನೆಯ ಶತಮಾನ.



ಡಿ. ವಿಶ್ವನಾಥ್ ಮತ್ತು ವಿ. ಎಸ್. ಪವಾರ್‌ರವರುಗಳ 'ಶ್ರೀ ಸಿದ್ಧಾರೂಢ ಸ್ವಾಮಿ', 'ಶ್ರೀ ಗುರುನಾಥ ರೂಢಸ್ವಾಮಿ'. ಚಿತ್ರಕೃತಿ : ಹುಬ್ಬಳ್ಳಿ.

ಶುಭರಾಯರ ವೈಷ್ಣವ ಭಕ್ತಿಯು ಅಖಂಡವಾದುದು. ಈ ಮೊದಲೇ ಹೇಳಿರುವಂತೆ ರಾಮಾಯಣ, ಮಹಾಭಾರತಗಳ ಜತೆ ಜತೆಗೇ ಭಗವದ್ಗೀತೆ, ಮಹಾಪುರಾಣ, ಗೀತಗೋವಿಂದ, ಅನಂತ ಸೌಂದರ್ಯದ ಪ್ರಕೃತಿ, ಕೃಷ್ಣ ಜನ್ಮಾಷ್ಟಮಿ, ರಾಮನವಮಿಗಳ ದೃಶ್ಯ ಲೋಕವೇ ಅದು. ಆಷಾಡ ಮತ್ತು ಕಾರ್ತಿಕ ಏಕಾದಶಿಯಂತಹ ಹಬ್ಬಗಳ ಆಚರಣೆಯ ದಿನಗಳಲ್ಲಿ ಅವರು ತಮ್ಮ ಮಠ ಮತ್ತು ಪಾಂಡುರಂಗನ ಗುಡಿಯನ್ನು ಕಾಗದದ ಅವಕಾಶದಲ್ಲಿ ಚಿತ್ರಿಸಿ ಅಲಂಕರಿಸುತ್ತಿದ್ದರು. ಉತ್ತರ ಭಾರತದಲ್ಲಿ ಸಾಂಝಿ ಕಾಗದ ಕಲೆಯಲ್ಲಿ ದೇವರ ರೂಪಗಳನ್ನು ಕತ್ತರಿಸಿ ಅಲಂಕರಿಸುವ ಪರಂಪರೆ ಇಲ್ಲಿ ನೆನಪಾಗುತ್ತದೆ. ಅಪರೂಪದ ವಸ್ತುವಾಗಿದ್ದ ಕಾಗದವು ದುಬಾರಿಯಾಗಿದ್ದ ಸಂದರ್ಭ ಅದು. ಹಾಗಾಗಿ ಶುಭರಾಯರು ಲೆಕ್ಕಪತ್ರ ಬರೆದು ಬಳಸಿದ ಕಾಗದಗಳನ್ನು ಚಿತ್ರಿಸಲು ಬಳಸಿದ್ದಾರೆ.

ಶುಭರಾಯರು ಸಂಗೀತ, ನೃತ್ಯಗಳ ಮೂಲಕವೂ ಪಾಂಡುರಂಗನನ್ನು ಭಕ್ತಿ ಭಾವದಿಂದ ಸೇವಿಸಿದರು. ಭಕ್ತಿಪಂಥದ ಪ್ರಸಿದ್ಧ ಕವಿ ಸೂರದಾಸ್‌ರ ಹಿಂದಿ ಹಾಡುಗಳು ಮತ್ತು ಶುಭರಾಯರ ಚಿತ್ರಗಳು ಮೂಲತಃ ಶ್ರೀ ಮದ್ಭಾಗವತವನ್ನು ಆಕರವನ್ನಾಗಿಸಿಕೊಂಡಿವೆ. ಹಾಗಾಗಿ ಸೂರದಾಸರ ಹಾಡುಗಳ ರಾಗ-ಲಯಗಳನ್ನು ಶುಭರಾಯರ ಚಿತ್ರಗಳಲ್ಲಿಯೂ, ಶುಭರಾಯರ ಚಿತ್ರಗಳ ಧ್ವನಿಯನ್ನು ಸೂರದಾಸರ ಹಾಡುಗಳಲ್ಲಿಯೂ ಗುರುತಿಸಬಹುದಾಗಿದೆ.

ಸುಮಾರು ೧೮ನೆಯ ಶತಮಾನದ ಅವಧಿಯಲ್ಲಿ ಸುರಪುರ ಸಂಸ್ಥಾನದ ನಾಯಕಮನೆತನವು ಅಲ್ಲಿನ ಸಂಪ್ರದಾಯ ಚಿತ್ರಕಲಾವಿದರನ್ನು ಪೋಷಿಸಿತು. ರಾಜಾ ಇಮ್ಮಡಿ ವೆಂಕಟಪ್ಪ ನಾಯಕ ಮತ್ತು ರಾಜಾ ನಾಲ್ವಡಿ ವೆಂಕಟಪ್ಪ ನಾಯಕರ ಆಳ್ವಿಕೆಯ ಅವಧಿಯಲ್ಲಿ ಗರುಡಾದ್ರಿ ಮನೆತನದ ಚಿತ್ರಕಾರರು ಸುರಪುರದಲ್ಲಿ ಚಿತ್ರಿಸುತ್ತಿದ್ದರು. ಅವರಲ್ಲಿ ಪ್ರಸಿದ್ಧನಾದ ಮೊದಲ ಬಾನಯ್ಯ ಗರುಡಾದ್ರಿಯು ವಿಜಯನಗರ ಚಿತ್ರಶೈಲಿಯಲ್ಲಿ ಚಿತ್ರಿಸಿದನು. ಆ ಕುಟುಂಬದ ಇನ್ನಿತರರಿಗಿಂತಲೂ ಇವನು ಚಿತ್ರಿಸಿದ ಕೃತಿಗಳು ಹೆಚ್ಚಿನ ಕುಶಲತೆಯಿಂದ ಕೂಡಿವೆ. ಬಹುತೇಕ ಕಲಾ ಪೋಷಕರ ಆರಾಧ್ಯ ದೇವತೆಗಳನ್ನು ಹೆಚ್ಚಾಗಿ ಚಿತ್ರಿಸಲಾಗಿದೆ. ಅರಸರ ಭಾವಚಿತ್ರಗಳೂ ಚಿತ್ರಿಸಲ್ಪಟ್ಟಿವೆ. ಆದರೆ ಶ್ರೀ ಕೃಷ್ಣನ ಲೀಲೆಗಳ ಹಲವು ಕೃತಿಗಳು, ಶಿವಪಾರ್ವತಿ, ಲಕ್ಷ್ಮಿ, ಸರಸ್ವತಿ, ಹನುಮಂತ, ಗರುಡ, ಶ್ರೀ ದತ್ತಾತ್ರೇಯ, ಶ್ರೀರಾಘವೇಂದ್ರರ ಚಿತ್ರಗಳು, ವೆಂಕಟರಮಣ, ಶ್ರೀಕೃಷ್ಣ, ಶ್ರೀರಾಮ ಪಟ್ಟಾಭಿಷೇಕ, ವೈಕುಂಠ ನಾರಾಯಣ ಇತ್ಯಾದಿ ಕೃತಿಗಳು ಅಂದಿನ ಸಂದರ್ಭದ ದೈವೀಕ ಮನಸ್ಥಿತಿಯ ಕಲಾಪೋಷಕರು, ಚಿತ್ರಿಸುವ ಕಲಾವಿದರನ್ನು ನೆನಪು ಮಾಡುತ್ತವೆ. ಅರಸರ ಆಶಯದಂತೆ ಹಲವರ ಭಾವಚಿತ್ರಗಳು ಕುಶಲತೆಯಿಂದ ಮೂಡಿ ಬಂದಿವೆ. ಆದರೆ ದೇವ ದೇವಿಯರ

ಚಿತ್ರಣಗಳಲ್ಲಿ ಕುಶಲತೆಯ ಜತೆ ಜತೆಗೇ ದೈವೀಕತೆಯ ಭಾವ ವೈಭವವಿದೆ. ಶ್ರೀರಾಮ ದರ್ಶನ ಕೃತಿಯ ಕಲ್ಪನೆ, ಚಿತ್ರ ಸಂಯೋಜನೆಗಳು ವಿಶಿಷ್ಟವಾಗಿರುವುದರ ಜತೆ ಜತೆಗೇ ಭಕ್ತಿಭಾವದ ಅನುಭವವೂ ನೋಡುಗರಿಗೆ ಆಗಬಲ್ಲದು. ಶ್ರೀರಾಮ ಸೀತೆಯರನ್ನು ವಿಶಿಷ್ಟವಾಗಿ ನೋಡಲಾಗಿದೆ. ಗಿರಿಜಾಕಲ್ಯಾಣದ ಚಿತ್ರಕೃತಿಯ ದೃಶ್ಯ ಸಂಯೋಜನೆಯ ಕಲ್ಪನೆಯಲ್ಲಿ ದೈವೀಕ ಸೌಂದರ್ಯ ಇದೆ. ಚಿತ್ರದ ಅವಕಾಶ, ವಿವಾಹ ಸಂದರ್ಭವನ್ನು ವೈಭವವೇ ಅಲ್ಲದೆ ಭಕ್ತಿ ಪೂರಕವಾಗಿಯೂ ಸಂಯೋಜಿಸಲಾಗಿದೆ. ದೇವತೆಗಳು ಕಿಕ್ಕಿರಿದು ಸಂಭ್ರಮಿಸುತ್ತಲೇ ಭಕ್ತಿಭಾವದಲ್ಲಿ ನಮ್ಮನ್ನೂ ಮೀಯಿಸುತ್ತಾರೆ.

ಕ್ರಿ.ಶ. ಸುಮಾರು ೧೭೮೩ರಲ್ಲಿ ಚಿತ್ರಿತಗೊಂಡಿರುವ 'ಚನ್ನಬಸವ ಪುರಾಣ'ದಲ್ಲಿಯೂ ಭಕ್ತಿ ಭಾವವು ವೈಭವೀಕರಿಸಲ್ಪಟ್ಟಿದೆ. ಆ ನಂತರದ ೧೯ನೆಯ ಶತಮಾನದಲ್ಲಿ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಸಂದರ್ಭದಲ್ಲಿ ವಿಜಯನಗರ ಮೂಲದ ಚಿತ್ರಗಾರರು ತಮ್ಮದೇ ಆದ ರೀತಿಯಲ್ಲಿ ಶ್ರೀರಂಗಪಟ್ಟಣ, ಮೈಸೂರುಗಳೇ ಅಲ್ಲದೆ ತಂಜಾವೂರಿನಲ್ಲಿಯೂ ಚಿತ್ರಿಸಿದರು; ಪ್ರಾದೇಶಿಕ ವಿಶಿಷ್ಟ ಸ್ಪರ್ಶ ನೀಡಿದರು. ಅಂದಿನ ಸಂದರ್ಭದ ಚಿತ್ರಗಾರರ ಕೃತಿಗಳೆಲ್ಲವೂ ಅರಸರೇ ಅಲ್ಲದೆ ಆಸಕ್ತ ಜನರು, ಭಜನೆ ಮನೆಗಳೇ ಅಲ್ಲದೆ ದೇವಾಲಯಗಳ ಭಿತ್ತಿಗಳಲ್ಲಿಯೂ ಕಾಣಿಸಿಕೊಂಡವು. ಭಕ್ತಿಯ ಪರಾಕಾಷ್ಠೆ. ೨೦೧೭ರ ಸಂದರ್ಭದಲ್ಲಿಯೂ ಅಂದಿನವರ ಮೈಸೂರು ಶೈಲಿಯ ವಿಶಿಷ್ಟ ಹೆಸರಿನಲ್ಲಿ ಕರೆಯಲ್ಪಡುವ ದೇವ ದೇವಿಯರ ಚಿತ್ರಗಳನ್ನು ವಿಶೇಷವಾಗಿ ಮೈಸೂರು ಶ್ರೀರಂಗಪಟ್ಟಣ ಹಾಗೂ ಬೆಂಗಳೂರುಗಳಲ್ಲಿ ನೋಡಬಹುದಿತ್ತು.

ಮುಮ್ಮಡಿ ಕೃಷ್ಣರಾಜ ಒಡೆಯರು ತಾವೇ ಚಿತ್ರಕಾರರಾಗಿದ್ದರಲ್ಲದೆ ಅಂದಿನ ಹಲವರಿಂದ ಚಿತ್ರಿಸುವಂತಹ ಸಂದರ್ಭವನ್ನು ಸೃಷ್ಟಿಸಿದರು. ಅದೊಂದು ದೈವೀಕ ದೃಶ್ಯ ಧ್ಯಾನವೇ ಸರಿ. ಹಲವು ಶಾಸ್ತ್ರಗಳ ಸಾರಸಂಗ್ರಹವಾದ ಶ್ರೀತತ್ವನಿಧಿಯಲ್ಲಿ ೯ ನಿಧಿಗಳಿವೆ. ೬೦೦೦ಕ್ಕೂ ಹೆಚ್ಚಾಗಿರುವ ಶ್ಲೋಕಗಳಲ್ಲಿ ದೇವತೆಗಳ ರೂಪಲಕ್ಷಣಗಳನ್ನು ಅಂದರೆ ವೈವಿಧ್ಯಮಯ ರೂಪ, ಬಣ್ಣ, ಉಡುಗೆ, ತೊಡಿಗೆ, ವಾಹನ, ಆಯುಧ ಇತ್ಯಾದಿಗಳನ್ನು ೧೮೪೩ ಚಿತ್ರಗಳಲ್ಲಿ ವರ್ಣಿಸಲಾಗಿದೆ. ಆ ವರ್ಣನೆಗಳೇ ಧ್ಯಾನ ಶ್ಲೋಕಗಳಂತೆ ಪಟಿಸಲ್ಪಟ್ಟು ಚಿತ್ರಕಾರರಿಂದ ಚಿತ್ರಿಸಲ್ಪಟ್ಟಿವೆ. ಸ್ವತಃ ಮುಮ್ಮಡಿಯವರೇ ಧ್ಯಾನ ಶ್ಲೋಕಗಳನ್ನು ಕಲಾವಿದರಿಗೆ ವಿವರಿಸಿ ಅವರು ಚಿತ್ರಿಸುವಂತೆ ನೋಡಿಕೊಳ್ಳುತ್ತಿದ್ದರೆಂದು ಓದಿದ ನೆನಪು. ಅಂದಿನ ಆ ಚಿತ್ರಕಾರರು ನಮ್ಮ ಪರಂಪರೆಯ ಕೊಡುಗೆಯಂತೆ "ಮೇಲಿನವನು ನಮ್ಮಿಂದ ಚಿತ್ರಿಸುತ್ತಿದ್ದಾನೆ" ಎಂಬ ನಂಬಿಕೆಯಿಂದಲೇ ಚಿತ್ರಿಸುತ್ತಿದ್ದರು. ಯಲ್ಲಯ್ಯ ರಾಮಾಂಜಿಯ ಮಗನಾದ

ನಾರಾಯಣ (೧೮೬೦), ಜಾವಗಲ್ಲು ನರಸಿಂಹಯ್ಯ, ದುರ್ಗದ ಕೃಷ್ಣಪ್ಪ ಮೊದಲಾದವರು ಇಲ್ಲಿನ ಚಿತ್ರಗಳನ್ನು ಚಿತ್ರಿಸಿದರೆಂದು ಹೇಳಲಾಗಿದೆ. ಹಾಗೆಯೇ ಮೈಸೂರು ಅರಮನೆ ಆವರಣದ ಪ್ರಸನ್ನ ಕೃಷ್ಣಸ್ವಾಮಿ, ಶ್ವೇತವರಾಹಸ್ವಾಮಿ ದೇವಾಲಯಗಳ ಭಿತ್ತಿಚಿತ್ರಗಳೂ ಇವರುಗಳ ಸಂದರ್ಭದ್ದೇ ಆಗಿದೆ. ವೈ. ಸುಬ್ರಹ್ಮಣ್ಯರಾಜು ಮತ್ತು ಎಂ.ಎಸ್. ನಂಜುಂಡರಾಯರೊಂದಿಗಿನ ಸಂಭಾಷಣೆಯ ಸಂದರ್ಭದಲ್ಲಿ ಈ ಲೇಖಕನು ಮಾಡಿಕೊಂಡಿದ್ದ ಟಿಪ್ಪಣಿಯಿಂದ ಈ ವಿವರಗಳನ್ನು ಉಲ್ಲೇಖಿಸಲಾಗಿದೆ.

ಈ ಅವಧಿಯ ಇಡೀ ಕಲಾ ಸೃಷ್ಟಿಯು ದೈವೀಕ ಧ್ಯಾನಮಯವೇ ಆಗಿದೆ. ಶಕ್ತಿನಿಧಿಯಲ್ಲಿ ಶಕ್ತಿದೇವತೆಯ ವಿವಿಧ ರೂಪಗಳ ವರ್ಣನಾಧ್ಯಾನ ಶ್ಲೋಕಗಳಲ್ಲಿ ಈ ಮೊದಲೇ ಹೇಳಿರುವಂತೆ ಇಲ್ಲಿನ ೧೩೦೦ ಶ್ಲೋಕಗಳಲ್ಲಿ ಶಕ್ತಿದೇವತೆಗಳ ಆಯುಧ, ಆಭರಣ, ಪುಷ್ಪ, ವಿಶೇಷ ರತ್ನ, ಲೋಹ, ಧೂಪ, ಸಂಗೀತವಾದ್ಯ, ಬಣ್ಣ ಮತ್ತು ವಾಹನಗಳನ್ನು ವರ್ಣಿಸಲಾಗಿದೆ. ವಿಷ್ಣು ನಿಧಿಯಲ್ಲಿ ವಿಷ್ಣುವಿನ ವಿವಿಧ ರೂಪಗಳ ವರ್ಣನೆಗಳಿವೆ. ಶಿವನಿಧಿಯಲ್ಲಿ ಪುರಾಣ, ಆಗಮ ಇತ್ಯಾದಿ ಮೂಲಗಳಿಂದ ಮುಮ್ಮಡಿ ಕೃಷ್ಣರಾಜ ಒಡೆಯರು ಗ್ರಹಿಸಿರುವ ಶಿವನ ವೈವಿಧ್ಯಮಯ ರೂಪಗಳನ್ನು ವರ್ಣಿಸಲಾಗಿದೆ. ಶಿವಶಿವೆಯರ ಸಪ್ತವಿದ ತಾಂಡವ ನೃತ್ಯ, ಶಿವನ ೫೫ ಲೀಲಾ ಮೂರ್ತಿಗಳ ವರ್ಣನೆ, ಗಣಪತಿಯ ೩೨ ರೂಪಗಳ ವರ್ಣನೆಗಳು ಇವೆ. ಬ್ರಹ್ಮನಿಧಿಯಲ್ಲಿ ಬ್ರಹ್ಮ, ಸರಸ್ವತಿಯರ ಧ್ಯಾನ ಶ್ಲೋಕಗಳು ಇವೆ. ಹಲವು ಬ್ರಹ್ಮರ, ಪ್ರಜೇಶ್ವರರ, ಸಪ್ತಋಷಿಗಳ, ೧೪ ಮನುಗಳ, ನವ ಚಿರಂಜೀವಿಗಳ, ಅಷ್ಟವಸುಗಳ, ಸಪ್ತಮಾರುತಗಳ, ಅಶ್ವಿನಿ ದೇವತೆಗಳ, ಸಪ್ತ ಸಮುದ್ರಗಳ, ನಾಲ್ಕು ವೇದಗಳ, ೬೪ ಕಲೆಗಳ ಹೆಸರುಗಳ, ೩೬ ರಾಗಗಳ, ತಾಳಗಳ, ಹೆಸರುಗಳ, ಸಂಕೀರ್ಣ ತಾಳಕ್ರಮಗಳ, ಶಿಲ್ಪಶಾಸ್ತ್ರ, ಅಲಂಕಾರಶಾಸ್ತ್ರ, ನಾಟ್ಯಶಾಸ್ತ್ರ ದೇವತೆಗಳ, ಧ್ಯಾನಶ್ಲೋಕಗಳೂ ಇವೆ. ಚಿತ್ರಗಳೂ ಅಪೂರ್ವವೇ ಆಗಿವೆ. ಅನಂತ, ವಾಸುಕಿ, ತಕ್ಷಕ ಇತ್ಯಾದಿ ಅಷ್ಟದಿಕ್‌ನಾಗಗಳು, ಉತ್ತಮ ಮತ್ತು ತಾಮಸಮನು, ೧೨೮ ಆಯುಧಗಳು, ಸ್ವರರಾಗಲಕ್ಷಣಗಳು ಇತ್ಯಾದಿಗಳು ಗಮನಿಸುವಂತಿವೆ. ಈ ವರ್ಣನೆಗಳನ್ನು ಭಕ್ತಿಯಿಂದ ಆಲಿಸಿ, ದೇಹ ಮತ್ತು ಮನಸ್ಸುಗಳ ಯೋಗಮಯ ತಲ್ಲೀನತೆಯಿಂದ ಅರ್ಪಣಾಮನೋಭಾವದಿಂದ ಇವರೆಲ್ಲರೂ ಚಿತ್ರಿಸುತ್ತಿದ್ದರು. ಮೈಸೂರು ಶೈಲಿಯ ಚಿತ್ರಗಳು ಬಹುತೇಕ ದೈವೀಕ ಅನುಭವ ಮೂಲದವೇ ಆಗಿರುತ್ತವೆ. ಹಾಗಾಗಿ ಚಿತ್ರಿಸುತ್ತಿದ್ದ ಕಲಾವಿದರು ಸಹಿಯನ್ನು ಹಾಕುತ್ತಿರಲಿಲ್ಲ. ೧೮೫೦ರ ಸಂದರ್ಭದಲ್ಲಿ ಜಾವಗಲ್ಲು ನರಸಿಂಹಯ್ಯ ಮೊದಲಾದವರು ತಮ್ಮ ಬಿಡಿ ಬಿಡಿ ಚಿತ್ರಕೃತಿಗಳಲ್ಲಿ ಸಹಿ ಮಾಡಿದ್ದಾರೆ. ಈ ಸಾಲಿಗೆ ಸುಂದರಯ್ಯ, ನುಗುವನಹಳ್ಳಿ ನಾರಾಯಣಪ್ಪ,

ತಿರುಪಳ್ಳಯ್ಯ ರಾಜು ತಿಪ್ಪಾಜಿ ಮೊದಲಾದವರನ್ನು ಸೇರಿಸಬಹುದು. ಆ ಸಂದರ್ಭದ ಕಲಾವಿದರಲ್ಲಿ ಒಬ್ಬೊಬ್ಬರೂ ತಮ್ಮದೇ ಆದ ವಿಶಿಷ್ಟವಸ್ತು, ರೂಪ ಕುರಿತ ಚಿತ್ರಗಳಿಗಾಗಿ ಹೆಸರಾಗಿದ್ದರು.

ದುರ್ಗದ ಕೃಷ್ಣಪ್ಪ 'ಭಾಗವತ' ಮತ್ತು 'ವಿಷ್ಣುಪುರಾಣ'ಗಳಲ್ಲಿ ಪರಿಣತರಾಗಿದ್ದುದರಿಂದ ಈ ಪಠ್ಯ ಮೂಲಗಳನ್ನು ಚಿತ್ರಿಸುವುದರಲ್ಲಿ ಪಾರಮ್ಯ ಹೊಂದಿದ್ದರು. ಜಾವಗಲ್ಲು ನರಸಿಂಹಯ್ಯ 'ಶಿವಪುರಾಣ' ಮತ್ತು 'ದೇವೀಮಹಾತ್ಮೆ'ಗಳ ಅಧ್ಯಯನ ಶೀಲಗಳಾಗಿದುದ್ದರಿಂದ ಅವರ ಖ್ಯಾತ 'ಕಾಮಕಾಮೇಶ್ವರಿ' ಕೃತಿಯೂ ಶಿವ-ಶಿವೆಯರ ಆಶಯ ಮೂಲದ್ದೇ ಆಗಿದೆ. ಶ್ರೀ ತತ್ವ ನಿಧಿಯ ಚಿತ್ರಕಾರರಲ್ಲಿ ಇಬ್ಬರಾದ ಎಲ್ಲಯ್ಯ ಮತ್ತು ವೀರಯ್ಯನವರ ಪರಂಪರೆಯ ಸುಂದರಯ್ಯನವರು ಸಹಜವಾಗಿಯೇ 'ಗಿರಿಜಾಕಲ್ಯಾಣ' ಶಿವನ 'ಸಂಧ್ಯಾತಾಂಡವ' ಮತ್ತು 'ಚಾಮುಂಡೇಶ್ವರಿ' ಕೃತಿಗಳು ಅವರ ಕಥಾನಕ ಸಾಮರ್ಥ್ಯವನ್ನು ಬಿಂಬಿಸುತ್ತವೆ. ಚಿತ್ರದುರ್ಗದ ನಾಯಕರ ಪೋಷಣೆಯಲ್ಲಿ ಬೆಳೆದ ಮಧುಗಿರಿ ಲಿಂಗಪ್ಪ ಶ್ರೀರಾಮನ ಭಕ್ತರಾಗಿದ್ದರು. ರಾಮಾಯಣವನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರು. ಅವರ 'ಶ್ರೀರಾಮ ಪಟ್ಟಾಭಿಷೇಕ' ಚಿತ್ರ ರೂಪವು ಮೈಸೂರಿನ ಸುತ್ತಮುತ್ತಲಿನ ಭಜನ ಮಂಡಳಿಗಳಲ್ಲಿಯೇ ಅಲ್ಲದೆ ಬೆಂಗಳೂರಿನ ಭಜನ ಮಂಡಳಿಗಳಲ್ಲಿಯೂ ಇವೆ. ಮೈಸೂರಿನ ಒಡೆಯರು ಈ ಕಲಾವಿದರ ಪೋಷಕರು ಮಾತ್ರವೇ ಅಲ್ಲದೆ ಇವರ ಕೃತಿಗಳನ್ನು ರಾಜ್ಯದ ಇತರ ಭಜನ ಮಂಡಳಿಗಳು ಕೊಂಡು ಸಂಗ್ರಹಿಸಿ ಪೂಜಿಸುವಂತೆಯೂ ಮಾಡುತ್ತಿದ್ದರು. ಹೀಗಾಗಿ ಭಜನೆ ಮಂಡಳಿಗಳಲ್ಲಿ ಹೆಚ್ಚಾಗಿ ಮಧುಗಿರಿ ಲಿಂಗಪ್ಪ, ದುರ್ಗದ ಕೃಷ್ಣಪ್ಪ, ನುಗುವನ ಹಳ್ಳಿ ನಾರಣಪ್ಪ, ವೆಂಕಟಸುಬ್ಬು, ಪಾತಾಳ ನಂಜುಂಡಪ್ಪ, ಕೊಂಡಯ್ಯ ಮತ್ತು ಅನಂತಮೂರ್ತಿಯವರುಗಳ ಚಿತ್ರಗಳಿವೆ. ಈ ಎಲ್ಲದರ ನಡುವೆ ತಿಪ್ಪಾಜಿಯವರು 'ವಿಶ್ವರೂಪ ಧರ್ಶನ'ಕ್ಕಾಗಿ ಖ್ಯಾತರಾಗಿದ್ದರು.

ಕ್ರಿ.ಶ. ೧೯ನೆಯ ಶತಮಾನದ ಅಂತ್ಯ ಹಾಗೂ ೨೦ನೆಯ ಶತಮಾನದ ಆರಂಭದ ಹೊತ್ತಿಗೂ ಮೈಸೂರು ಅರಮನೆಯ ಮೂಲದ ಅಂದರೆ ನಾಲ್ವರು ಕಲಾ ಪೋಷಕ ಅರಸರ ಆಸ್ಥಾನದಲ್ಲಿದ್ದ ಡಿ.ಎಂ. ಕೊಂಡಯ್ಯ, ವೈ. ನಾಗರಾಜು, ವೈ. ಸುಬ್ರಹ್ಮಣ್ಯರಾಜು, ಎಸ್. ಶಂಕರರಾಜು, ತಿರುಪಳ್ಳಯ್ಯ ರಾಜು, ಶಿಲ್ಪಿಸಿದ್ಧಾಂತಿ ಸಿದ್ಧಲಿಂಗಸ್ವಾಮಿ ಯವರುಗಳೆಲ್ಲಾ ದೈವಭಾವ ತೀವ್ರತೆಯ ಕೃತಿಗಳನ್ನು ಸೃಷ್ಟಿಸುವುದಕ್ಕೆಂದೇ ಜೀವಿಸುತ್ತಿದ್ದವರು. ಡಿ.ಎಮ್. ಕೊಂಡಯ್ಯ ಚಾಮರಾಜ ಒಡೆಯರ ಸಂದರ್ಭದಲ್ಲಿ ವಾಣಿವಿಲಾಸ ಸನ್ನಿಧಾನದ ಲಿಥೋ ಗ್ರಾಫಿ ಮುದ್ರಿತ ರಾಮಾಯಣ ಕಥಾನಕಕ್ಕೆ ರೇಖಾಚಿತ್ರಗಳನ್ನು ರೇಖಿಸಿದವರು. ೧೯೬೫ರ ವರೆಗೂ ನಮ್ಮ ನಡುವೆ ಇದ್ದ ಅರಮನೆಯ ಕಲಾವಿದರು ವೈ. ಸುಬ್ರಹ್ಮಣ್ಯರಾಜುರವರು

ಎಲ್ಲಿ ಚಿತ್ರಿಸಿದರೂ, ಯಾರಿಗಾದರೂ ಚಿತ್ರಿಸಿದರೂ ಮೈಸೂರು ಶೈಲಿಯಲ್ಲಿ ದೇವ ದೇವಿಯರನ್ನೇ ಚಿತ್ರಿಸುತ್ತಿದ್ದರು. ಮೈಸೂರಿನಲ್ಲಿ ಮೊದಲ ವಿಶ್ವಕನ್ನಡ ಸಮ್ಮೇಳನ ನಡೆದಾಗ ಅಲ್ಲಿನ ಕಲಾಶಿಬಿರದಲ್ಲಿ ಮೋಹಿನಿಯು ಅಮೃತವನ್ನು ದೇವತೆಗಳಿಗೆ ಹಂಚುವ ದೃಶ್ಯ ರೂಪವನ್ನು ಚಿತ್ರಿಸಿದ್ದರು. ಕ್ಯಾನ್‌ವಾಸಿನ ಮೇಲೆ ಚಿನ್ನದ ಹಾಳೆಗಳನ್ನೂ (ಮೈಸೂರು ಸಂಪ್ರದಾಯ ಚಿತ್ರಗಳಲ್ಲಿ ಆಭರಣಗಳಿಗೆ ಅಂಟಿಸುವಂತೆ) ಅಂಟಿಸಿದರು! ಅವರ ಮನೆತನದ ವೈ. ನಾಗರಾಜು, ಶಂಕರರಾಜುರವರುಗಳೂ ದೈವೀಕ ರೂಪಗಳನ್ನು ಚಿತ್ರಿಸುತ್ತಲೇ ಬದುಕಿದ್ದವರು. ತಿರುಪಳ್ಳಯ್ಯರಾಜುರವರ ಚಿತ್ರಿಸುವ ಆಶಯವೂ ದೈವೀಕವೇ ಆಗಿದ್ದಿತು. ಶಿಲ್ಪಿಸಿದ್ಧಾಂತಿ ಸಿದ್ಧಲಿಂಗಸ್ವಾಮಿಯವರ ಇಡೀ ಸೃಷ್ಟಿಯೇ ದೈವೀಕವಾದುದು. ಅವರ ಶಿಲ್ಪ, ಚಿತ್ರ, ಬರಹ ಎಲ್ಲವೂ ದೈವ ಸಂಬಂಧಿಯಾಗಿದ್ದಿತು. ಅಚ್ಚರಿಯಂತೆ ಅವರ 'ಶಿಲ್ಪಸಾರ'(೧೯೪೮) ಪದ್ಯವು ಷಟ್ಪದಿ ಖಂಡ ಕಾವ್ಯ ಮತ್ತು ಶಿಲ್ಪಶಾಸ್ತ್ರ ಸೂಕ್ಷ್ಮಗಳ ಪ್ರೌಢ 'ಪರಸ್ಪರ'ವೇ ಆಗಿದೆ. ಒಟ್ಟು ೧೦೮ ಷಟ್ಪದಿಗಳಲ್ಲಿ ಬದುಕಿನ ಎಲ್ಲವೂ ಶಿಲ್ಪಮಯ ಎನ್ನುವ ಅನುಭವವಿದೆ. ಲೌಕಿಕ, ಅಲೌಕಿಕ ಲೋಕಗಳು, ಧಾರ್ಮಿಕ ಆಚರಣೆ, ದೈನಂದಿನ ಬದುಕಿನ ಜಲಯಾನ, ಆಕಾಶಯಾನ, ಗ್ರಾಮ, ನಗರ, ರೈತನ ಕೃಷಿ ಮೂಲದ ಸಲಕರಣೆಗಳು, ಪಾತ್ರೆ ಪಡಗಗಳು, ಯಜ್ಞಕುಂಡ, ಪೀಠೋಪಕರಣ, ರೇಖಾಕೃತಿಗಳು, ಹೀಗೆ ಎಲ್ಲವೂ ಶಿಲ್ಪಸದೃಶವಾಗಿರುವಿಕೆಯ ದರ್ಶನವು ಅದರಲ್ಲಿದೆ.

> ವೇದಗಳು ಶಿಲ್ಪವನು ಬೋಧಿಪು ವಾದರದಿ ಸೂತ್ರಾರ್ಥ ರೂಪದಿ
> ವೇದಶಿಲ್ಪವು ಶಿಲ್ಪವೇದವಿದೆಂದು ನಿರ್ಣಯಿಸಿ
>
> ಭೇದವಿಲ್ಲವು ವೇದಶಿಲ್ಪಕೆ । ವಾದವೇನಿಲ್ಲೊಂದೆ ನಿಜವಿದು
> ಆದಿಶಿಲ್ಪವೆಯಾಗ ಮಂಗಳ ರೂಪತಾಳಿಹುದು ॥೧೨॥

ಎಂಬ ಷಟ್ಪದಿಯು ಗಮನಾರ್ಹ.

ಸಿದ್ಧಲಿಂಗಸ್ವಾಮಿಯವರ ಶಿಲ್ಪಗಳು ಮತ್ತು ಚಿತ್ರಗಳು ಶಿಲ್ಪಶಾಸ್ತ್ರೀಯ ಸೂತ್ರಬದ್ಧ ಸೃಷ್ಟಿಗಳು. ಅವರ ಶಿಲ್ಪ, ದೇವಾಲಯ ಶಿಲ್ಪ, ಚಿತ್ರಗಳೆಲ್ಲವೂ ಮೈಸೂರು ಅರಮನೆಯ ಒಳಗೆ ಹಾಗೂ ಹೊರಗೆ ಇವೆ. ಅವರು ರವಿವರ್ಮನ ಕ್ಯಾಲೆಂಡರ್ ಮತ್ತು ಓಲಿಯೋಗ್ರಾಫ್ ಪ್ರಿಂಟ್‌ಗಳ ಜನಪ್ರಿಯತೆ ಕಂಡಿದ್ದವರು; ಪರೆಂಪರೆಯ ದೈವೀಕ ಬೇರುಗಳನ್ನು ಪ್ರಾಣ ಎಂಬಂತೆ ಅಪ್ಪಿಕೊಂಡಿದ್ದವರು. ರವಿವರ್ಮನ ಪ್ರೆಸ್ಸಿನಲ್ಲಿಯೇ ಅವರ 'ಕೈಲಾಸಶಂಕರ' ಕೃತಿಯು(೧೯೨೮) ಮುದ್ರಣಗೊಂಡಿತು; ದಕ್ಷಿಣ ಭಾರತದ ಬಹುತೇಕ ಮನೆಗಳನ್ನು ಸೇರಿತು. ೨೦೧೭ರ ಸಂದರ್ಭದಲ್ಲಿ ಆ ಕೃತಿಯ ಛಾಯಾಚಿತ್ರಿತ ಪ್ರಿಂಟ್‌ಗಳು ಹೆಚ್ಚಾಗಿ ಕೊಳ್ಳಲ್ಪಡುತ್ತಿತ್ತು. ಶಿವಶಿವೆಯರ ಚಿತ್ರಣದ ವೈಭವವು ದೈವೀಕವಾಗಿಯೇ ಅಲ್ಲದೆ ಕಲಾತ್ಮಕವಾಗಿಯೂ ಕಲಾಭಿಮಾನಿ

ಜನರನ್ನು ಸೆಳೆಯುತ್ತದೆ. ಈ ಕೃತಿಯ ಹಳೆಯ ಪ್ರಿಂಟ್‌ಗಳಿಗೂ ರವಿವರ್ಮನ ಪ್ರಿಂಟ್‌ಗಳಿಗಿರು ವಂತೆ ಬೇಡಿಕೆ ಇದೆ. ಅಲಹಾಬಾದ್ ವಿಶ್ವವಿದ್ಯಾನಿಲಯದ ಪ್ರಸನ್ನಕುಮಾರ್ ಆಚಾರ್ಯ ಸಂಪಾದಿಸಿ ಪ್ರಕಟಿಸಿರುವ 'ಮಾನಸಾರ' ಶಿಲ್ಪಶಾಸ್ತ್ರದ ಪ್ರತಿಮಾ ಶಿಲ್ಪ ಭಾಗದಲ್ಲಿ ಸಿದ್ಧಲಿಂಗಸ್ವಾಮಿಯವರ ಚಿತ್ರಗಳಿವೆ : ಇವು ಶಿಲ್ಪಶಾಸ್ತ್ರೀಯವಾಗಿವೆ. ಹತ್ತು ತಾಲಗಳ 'ಜಿನ ಮತ್ತು ಅವನ ಅನುಯಾಯಿಗಳು', 'ಸರಸ್ವತಿ', 'ಮಹಾಲಕ್ಷ್ಮಿ', 'ಬುದ್ಧ', 'ಬ್ರಹ್ಮ', 'ಸರಸ್ವತಿ' ಮತ್ತು 'ಸಾವಿತ್ರಿ', 'ಶಿವ ಮತ್ತು ಪಾರ್ವತಿ,' 'ವಿಷ್ಣು', ಲಕ್ಷ್ಮಿ ಮತ್ತು ಭೂದೇವಿ, ದೇವತೆಗಳ ಕುಂತಲಾ, ಜಟಾ, ಮಂಜೂಷಾ, ಉಯ್ಯಾಲೆ ಇತ್ಯಾದಿಗಳಿವೆ.

ಅರಮನೆಯ ದರ್ಬಾರ್ ಹಾಲ್‌ನಲ್ಲಿರುವ ಗಾಯಿತ್ರಿ, ಭುವನೇಶ್ವರಿ, ರಾಜರಾಜೇಶ್ವರಿ, ಕಾಳಿಕಾದೇವಿ, ಮಹಿಷಾಸುರ ಮರ್ಧಿನಿ ದೇವತೆಗಳ ಚಿತ್ರಗಳು, ಅವರೇ ರೂಪಿಸಿದ ಅರಮನೆಯ ಆವರಣದ ಭುವನೇಶ್ವರಿ ದೇವಾಲಯದ ಗಾರೆ ಶಿಲ್ಪಗಳ ವೈವಿಧ್ಯಮಯ ದೇವೀ ರೂಪಗಳು, ಅರಮನೆಯ ಹೊರಗೆ ಇರುವ 'ಕಾಮಕಾಮೇಶ್ವರಿ' ದೇವಾಲಯದ ಶಿಲ್ಪಗಳು, ಅರಮನೆಯ, 'ಭುವನೇಶ್ವರಿ' ಶಿಲ್ಪ 'ನವದುರ್ಗ' ಚಿನ್ನದ ಶಿಲ್ಪ ಇತ್ಯಾದಿಗಳು ಅವರ ಶಿಲ್ಪಶಾಸ್ತ್ರ ಪ್ರಾವೀಣ್ಯಕ್ಕೇ ಅಲ್ಲದೆ ಕರಕುಶಲತೆ ಮತ್ತು ದೈವೀಕತೆಗೂ ಉತ್ತಮ ಉದಾಹರಣೆಗಳು. ಈ ದೈವೀಕ ಅನುಭಾವವು ಅವರಲ್ಲಿ ಇತರರು ಪ್ರಭಾವಗೊಳ್ಳುವಂತಿತ್ತು. ಹಾಗಾಗಿಯೇ ಅರಮನೆಯ ಚಿತ್ತವು ಸಿದ್ಧಲಿಂಗಸ್ವಾಮಿಯವರತ್ತಲೇ ಇದ್ದಿತು. ವೆಂಕಟಪ್ಪನವರ ಸಮಕಾಲೀನರಾಗಿ ದರ್ಬಾರ್ ಸಭಾಂಗಣದಲ್ಲಿ ಸಿದ್ಧಲಿಂಗಸ್ವಾಮಿಗಳ ಚಿತ್ರಿತ, ನಿರ್ಧಾರಿತ ಕೃತಿಗಳು ಅಲಂಕರಿಸಲ್ಪಟ್ಟವು.

ದುರ್ಗದ ಕೃಷ್ಣಪ್ಪನವರ ಮಗನಾಗಿಯೂ ಕೊಲ್ಕತ್ತೆಯಲ್ಲಿ ಕಲಿತು ಬಂದರೂ, ಅಲ್ಲಿ 'ಭಾರತೀಯ ಕಲೆಯ ಪುನರುಜ್ಜೀವನ' ಸಂದರ್ಭದ ಸಾಕ್ಷಿಯಾಗಿ, ಆನಂದ ಕುಮಾರಸ್ವಾಮಿ ಮತ್ತು ನಿವೇದಿತಾರವರಿಗಾಗಿ ರಾಮಾಯಣದ ಹಲವು ಚಿತ್ರಗಳನ್ನು ಚಿತ್ರಿಸಿಕೊಟ್ಟು, ಅವುಗಳು ಪ್ರಕಟಗೊಂಡು ವಿಖ್ಯಾತರಾದರೂ ಅವರ ಅಭಿವ್ಯಕ್ತಿಯ, ಗಾಂಭೀರ್ಯ, ಮೆದುವಾದ ಮಿತಹಿತ ಕಲಾಮೀಮಾಂಸೆ ಬಹು ಜನರನ್ನು ಆಕರ್ಷಿಸುವಂಥದ್ದು ಆಗಿರಲಿಲ್ಲ. ಅವರ ವ್ಯಕ್ತಿತ್ವವು ದೈವೀಕ ಅನುಭವ ಲೋಕದ ಫಲವೇ ಆಗಿದ್ದರೂ, ಪರಂಪರೆಯ ಪಕ್ಷಪಾತಿಯಾಗಿದ್ದರೂ ಹೊಸತನ್ನೂ ನೋಡುವ, ಕಲಿಯುವ, ಮಾಡುವ ಪ್ರವೃತ್ತಿಯವರು ಅವರು. ಹಾಗಾಗಿಯೇ ಕೇವಲ ದೇವತೆಗಳನ್ನು ಮಾತ್ರವೇ ಅಲ್ಲದೆ ಭಾರತೀಯ ಪುರಾಣ, ಇತಿಹಾಸಗಳ ಪ್ರಜ್ಞೆಯನ್ನೂ ಅರಗಿಸಿಕೊಂಡು ವೆಂಕಟಪ್ಪನವರು ಸಮಕಾಲೀನವಾಗಿ ಅಭಿವ್ಯಕ್ತಿಸುತ್ತಿದ್ದರು. ಹಾಗಾಗಿ ಅವರಿಂದ ಅರಮನೆಗಾಗಿ 'ಶಿವತಾಂಡವ' ಉಬ್ಬು ಶಿಲ್ಪರೂಪುಗೊಂಡರೂ ಅದು ನಮ್ಮ ಸಂಪ್ರದಾಯಶೀಲರಿಗೆ ಹಿಡಿಸದಂತಾಗಿರಬಹುದು. ತಾಲಮಾನ ಪ್ರಮಾಣಗಳನ್ನು

ಸಾಂಪ್ರದಾಯಿಕವಾಗಿ ಗ್ರಹಿಸುವ ವೆಂಕಟಪ್ಪ, ಸಮಕಾಲೀನವಾಗಿ ರೂಪಗಳನ್ನು ದೃಶ್ಯಿಸುತ್ತಿದ್ದರು. ದಶಾವತಾರಗಳಲ್ಲಿ ಒಂದೆಂದು ಬುದ್ಧನನ್ನು ನಮ್ಮ ಶಿಲ್ಪ ಶಾಸ್ತ್ರಗಳು ಒಪ್ಪಿಕೊಂಡರೂ, ನಮ್ಮ ಪರಂಪರೆಯ ಚಿತ್ರಸೂತ್ರಗಳಲ್ಲಿನಂತೆ ರೂಪಿಸದೆ ವೆಂಕಟಪ್ಪನವರು ಬುದ್ಧನನ್ನು 'ಮಹಾ ಪರಿತ್ಯಾಗ'ವನ್ನಾಗಿ ರೂಪಿಸಿದ್ದು ಆ ಸಂದರ್ಭದ ಅರಸರ ಹತ್ತಿರದ ಇತರ ಶಿಲ್ಪಿಗಳು, ಸಲಹೆಗಾರರು, ಆಪ್ತರಿಗೆ ಇಷ್ಟವಾಗಲಿಲ್ಲವೇನೋ ! ಇಷ್ಟಕ್ಕೂ ಅರಮನೆಯಲ್ಲಿ ಬುದ್ಧನ 'ಮಹಾಪರಿತ್ಯಾಗ'ದ ಕೃತಿಯ ಪ್ರತಿಷ್ಠಾಪನೆಯೇ? ಬೇಡ ಎಂದು ಅವರೆಲ್ಲ ಸಲಹೆ ನೀಡಿರಬೇಕು. ಹಾಗೆ ನೋಡಿದರೆ ನಮ್ಮ ಸಂಪ್ರದಾಯ ಪಠ್ಯಗಳು ಇಂತಹ ಅಂಶಗಳ ಬಗ್ಗೆಯೂ ಮಾತನಾಡಿವೆ ಎಂಬುದು ಗಮನಾರ್ಹ.

ಚಿತ್ರಸೂತ್ರದಲ್ಲಿ ಮಾರ್ಕಂಡೇಯ ಮತ್ತು ವಜ್ರರ ಸಂವಾದದ ಶ್ಲೋಕಗಳಲ್ಲಿ ಒಂದೆಡೆ "ಶೃಂಗಾರ, ಹಾಸ್ಯ, ಶಾಂತ ರಸಗಳ ಚಿತ್ರಗಳನ್ನು ಮನೆಗಳಲ್ಲಿ ಚಿತ್ರಿಸಬೇಕು, ಉಳಿದ ರಸಗಳನ್ನು ಎಂದೂ ಯಾರೂ ಮನೆಗಳಲ್ಲಿ ಚಿತ್ರಿಸಬಾರದು, ಎಲ್ಲ ರಸಗಳ ಚಿತ್ರಗಳನ್ನು ದೇವಾಲಯ ಅರಮನೆಗಳಲ್ಲಿ ಚಿತ್ರಿಸಬೇಕು. ಆದರೆ ಅರಮನೆಯ ರಾಜರವಾಸದ ಭಾಗಗಳಲ್ಲಿ ಎಲ್ಲ ರಸಗಳನ್ನು ಚಿತ್ರಿಸಬಾರದು; ರಾಜರ ಸಭಾಗೃಹದಲ್ಲಿ ಚಿತ್ರಿಸಬೇಕು ಎಂದಿದೆ. ದೇವಾಲಯ, ಅರಮನೆಗಳ ಹೊರತು ಬೇರೆಯಾವ ಮನೆಗಳಲ್ಲಿಯೂ ಯುದ್ಧ, ಸ್ಮಶಾನ, ಕರುಣೆತರುವ ಸಾವು, ದುಃಖಾರ್ತತೆ, ಕುತ್ಸಿತ, ಅಮಂಗಲಕಾರಿ ದೃಶ್ಯಗಳ ಚಿತ್ರಗಳನ್ನು ಎಂದೂ ಚಿತ್ರಿಸಬಾರದು" ಎಂದೂ ಹೇಳಲಾಗಿದೆ.[೧] ಹೀಗಿದ್ದರೂ ವೆಂಕಟಪ್ಪನವರ ಕಲಾಕೃತಿಗಳನ್ನು ಅರಮನೆಯ ಅಧಿಕಾರ ವರ್ಗ ತಿರಸ್ಕರಿಸಿದ್ದರ ಹಿಂದೆ ಪಟ್ಟಭದ್ರ ಹಿತಗಳ ರಾಜಕಾರಣ ಕೆಲಸ ಮಾಡಿರಬೇಕು.[೧A] ಹಾಗಿಲ್ಲದಿದ್ದಲ್ಲಿ ಪ್ರಸ್ತುತ ಬೆಂಗಳೂರಿನ ವೆಂಕಟಪ್ಪ ಗ್ಯಾಲರಿಯಲ್ಲಿರುವ ಪ್ಲಾಸ್ಟರ್ ಆಫ್ ಪ್ಯಾರೀಸ್‌ನ ಎಲ್ಲ ಉಬ್ಬು ಶಿಲ್ಪ/ಫಲಕಗಳು ಮೈಸೂರಿನ ಅರಮನೆಯಲ್ಲಿರುವ ವೆಂಕಟಪ್ಪನವರ ಉಬ್ಬು ಶಿಲ್ಪಗಳ ಜತೆಜತೆಗೇ ಇರಬೇಕಿತ್ತು; ಹಾಗಾಗಲಿಲ್ಲ. ವೆಂಕಟಪ್ಪನವರ ಕಲೆ ಮತ್ತು ವ್ಯಕ್ತಿತ್ವದ ಬಗ್ಗೆ ಜೆ.ಹೆಚ್. ಕಸಿನ್ಸ್ ತಮ್ಮ ಪತ್ರಗಳಲ್ಲಿ ವೆಂಕಟಪ್ಪನವರ ಬಗ್ಗೆ ಏನೇ ಹೇಳಿರಲಿ[೨] ವೆಂಕಟಪ್ಪನವರ ಕಲೆಯಲ್ಲಿ ಬಂಗಾಳದ ಪುನರುಜ್ಜೀವನ ಪರಂಪರೆಯ ಆಶಯ(Idelogy) ತೀವ್ರತೆಯಿಂದ ಕಾಣಿಸಿಕೊಂಡಿದೆ. ವೆಂಕಟಪ್ಪನವರು ಆನಂದ ಕುಮಾರಸ್ವಾಮಿ ಮತ್ತು ಸಹೋದರಿ ನಿವೇದಿತಾರವರುಗಳು ಸಂಪಾದಿಸಿದ Myths of the Hindus and Buddhists ಕೃತಿಗೆ ಸಾಂದರ್ಭಿಕ ವಾಗಿ ರಾಮಾಯಣದ ಹಲವು ಸಂದರ್ಭಗಳಿಗೆ ಸಂಬಂಧಿಸಿದಂತೆ ೧೯೧೩ರಲ್ಲಿ ವಿಶಿಷ್ಟ ಕೃತಿಗಳನ್ನು ಜಲವರ್ಣಗಳಲ್ಲಿ

ಚಿತ್ರಿಸಿಕೊಟ್ಟಿದ್ದಾರೆ. 'ಸೀತಾ ಪರಿಣಯ' 'ಮಾಯಾಜಿಂಕೆ ಮತ್ತು ಶ್ರೀರಾಮ' 'ಭೂದೇವಿಯು ಶ್ರೀರಾಮನಿಗಾಗಿ ಪಾದರಕ್ಷೆಗಳನ್ನು ನೀಡುತ್ತಿರುವಿಕೆ', 'ಜಟಾಯು ರಾವಣರ ಕಾಳಗ,' 'ಹನುಮಂತನಿಗೆ ತನ್ನ ಉಂಗುರವನ್ನು ಕೊಡುತ್ತಿರುವ ಶ್ರೀರಾಮ, 'ಲಂಕೆಗೆ ಸೇತುವೆಯ ನಿರ್ಮಾಣ', 'ಲಂಕಾದಹನ' ಮತ್ತು 'ಶ್ರೀರಾಮನು ಅಯೋಧ್ಯೆಗೆ ಹಿಂತಿರುಗುತ್ತಿರುವಿಕೆ' ಮೊದಲಾದ ಚಿತ್ರಕೃತಿಗಳವು.[೩]

ಚಾಮುಂಡಿಬೆಟ್ಟದ ಕಲ್ಲಿನ ಬಸವ, ದೇವಾಲಯವೊಂದರ ನೋಟ, ಅರ್ಧನಾರೀಶ್ವರ ಮೊದಲಾದ ಕೃತಿಗಳೂ ಅವರ ಕುಂಚದ ಗಮನವನ್ನು ಸೂಚಿಸುತ್ತವೆ. ಅವರ ಹಲವು ವಿಶಿಷ್ಟ ಭೂ ದೃಶ್ಯಗಳಲ್ಲಿ, ಪ್ರಕೃತಿಯ ಮೌನದಲ್ಲಿ ದೈವೀಕತೆಯ ಅನುಭವವನ್ನು ಅನುಭವಿಸಬಹುದೇ? ಎಂಬಷ್ಟು ಸೌಂದರ್ಯವನ್ನು ಅವು ಅರಗಿಸಿಕೊಂಡಿವೆ.[೪]

ಮೂಡುಗೋಡು ಹಿರಣ್ಯಪ್ಪ (1867–1943) ಪರಂಪರೆಯ ಶಿಲ್ಪಜ್ಞಾನವನ್ನು ಅರಗಿಸಿಕೊಂಡವರು. ಶಿಲ್ಪಗಳ ರೂಪ ವಿವರಗಳುಳ್ಳ ಧ್ಯಾನಶ್ಲೋಕಗಳ ಅವಲಂಬಿತ ಅವರ ಶಿಲ್ಪಗಳು ಕರಕುಶಲತೆಯ ಜತೆಜತೆಗೇ ದೈವೀಕತೆಯ ದರ್ಶನವೂ ಆಗುವಂತೆ ರೂಪುಗೊಂಡಿವೆ. ಗುಡಿಗಾರರ ಮನೆತನದ ಶಿಲ್ಪ, ಸೃಷ್ಟಿಶೀಲತೆಯ ಜತೆಜತೆಗೇ ಬಳ್ಳಿಗಾವೆ, ಇಕ್ಕೇರಿ, ಕೆಳದಿ ದೇವಾಲಯಗಳ ಅಧ್ಯಯನವು ಚಾಲುಕ್ಯ, ಹೊಯ್ಸಳ, ವಿಜಯನಗರ ನಾಯಕರ ದೇವಾಲಯ ಶಿಲ್ಪ, ವಾಸ್ತುಶಿಲ್ಪಗಳ ಪರಿಚಯ ನೀಡಿತು. ಹೀಗಾಗಿ ಅವರ ಕಲೆಯಲ್ಲಿ ಗುಡಿಗಾರರ ಕುಶಲತೆಯೊಂದಿಗೆ ಅಂದರೆ ಸೂಕ್ಷ್ಮಾತಿಸೂಕ್ಷ್ಮ ನಾಜೂಕಿನ ವಿವರಗಳು ಕಾಣಿಸಿಕೊಂಡವು. ಪುರಾಣಗಳ ಪ್ರಜ್ಞೆಯು ಹಿರಣ್ಯಪ್ಪನವರಲ್ಲಿ ತೀವ್ರತೆಯಿಂದ ಮಡುಗೊಂಡಿತ್ತು. ಹಾಗಾಗಿಯೇ ಮೈಸೂರು ಅರಮನೆಯ ಆಹ್ವಾನದಂತೆ ಅಲ್ಲಿ ಉಳಿದುಕೊಂಡು ಸೃಷ್ಟಿಸಿಕೊಟ್ಟ 'ರಾಮಲಕ್ಷ್ಮಣ ಸೀತಾ ಪಂಚಾಯತನ', 'ಶಿವಪಂಚಾಯತನ', 'ಕಾಳಿಂಗ ಮರ್ದನ ಕೃಷ್ಣ', ಶಿವತಾಂಡವ' ಮೊದಲಾದ ದೇವಿದೇವಿಯರ ದಂತದ ಉಬ್ಬು ರೂಪಶಿಲ್ಪಗಳು ಬಾಹ್ಯರೂಪವೇ ಅಲ್ಲದೆ ಆಂತರಿಕ ಸೌಂದರ್ಯದಿಂದಲೂ ಕೂಡಿವೆ. ಅಂದರೆ ನೋಡುಗರಿಗೆ ದೈವೀಕ ಆನಂದವನ್ನು ಉಂಟುಮಾಡುತ್ತವೆ.

ಮೈಸೂರಿನ ಜಯಚಾಮ ರಾಜೇಂದ್ರ ಒಡೆಯರಿಗೆ ರಾಜಗುರುಗಳಾಗಿದ್ದ ಸಿದ್ಧಲಿಂಗಸ್ವಾಮಿಯವರು ಆ ಸಂದರ್ಭದಲ್ಲಿ ರವಿವರ್ಮನ ಪ್ರಿಂಟ್‌ಗಳ ಪ್ರಭಾವವನ್ನು ಕಂಡಿದ್ದವರು. ಈ ಮೊದಲೇ ಹೇಳಿರುವಂತೆ ಅವರ ಹಲವು ದೇವ–ದೇವಿಯರ ಕೃತಿಗಳು ಪ್ರಿಂಟ್ ಮಾಧ್ಯಮದಲ್ಲಿ ಜನರ ಭಕ್ತಿ ಭಾವದ ಪಾರಮ್ಯವನ್ನು ಹೆಚ್ಚಿಸುವಲ್ಲಿ ಪ್ರಭಾವ ಬೀರಿದ್ದುಂಟು. ಇದೇ ಹಾದಿಯಲ್ಲಿ ಅವರ ಪುತ್ರ ನಾಗೇಂದ್ರ ಸ್ಥಪತಿಯವರೂ

ನಡೆದರು. ಸಿದ್ಧಲಿಂಗಸ್ವಾಮಿಯವರ 'ಕೈಲಾಸ ಶಂಕರ' ತೈಲವರ್ಣಕೃತಿಯು ರವಿವರ್ಮನ ಪ್ರೆಸ್‌ನಿಂದ ಮುದ್ರಿತಗೊಂಡು ಜನರಿಂದ ಪೂಜೆಗೊಳ್ಳುತ್ತಿತ್ತು. ನಾಗೇಂದ್ರಸ್ಥಪತಿಯವರು 'ಶ್ರೀಮಹೇಶ್ವರ,' 'ವರಲಕ್ಷ್ಮಿದೇವಿ,' 'ತ್ರಿಪುರಾರಿಶಂಕರ,' 'ಕ್ಷೇತ್ರ ರಾಮೇಶ್ವರಂ,' 'ಪಾಂಡುರಂಗಸ್ವಾಮಿ,' 'ಪಳನಿ ಆಂಡವರ್' ಮೊದಲಾದ ಕೃತಿಗಳನ್ನು ಪ್ರಿಂಟ್ ಮಾಧ್ಯಮದಲ್ಲಿ ಸಾರ್ವಜನಿಕವಾಗಿ ಬಿಡುಗಡೆಗೊಳಿಸಿದರು. ಆ ಸಂದರ್ಭದಲ್ಲಿ ಬೆಂಗಳೂರು, ಮದ್ರಾಸುಗಳ ಮೂಲಕ ಇಡೀ ದಕ್ಷಿಣ ಭಾರತವನ್ನು ಈ ಪ್ರಿಂಟ್‌ಗಳು ತಲುಪುತಿದ್ದವು. ಇದೊಂದು ರೀತಿಯಲ್ಲಿ ತಂತ್ರಜ್ಞಾನದ ನೆರವು ಪಡೆದು ಹೆಚ್ಚು ಜನರನ್ನು ದೈವೀಕ ಅನುಭವಕ್ಕೆ ಒಳಗಾಗಿಸುವ ಪ್ರಕ್ರಿಯೆಯೇ ಸರಿ. ನಾಗೇಂದ್ರಸ್ಥಪತಿಯವರ ಹಲವು ಕೃತಿಗಳು ಬೆಂಗಳೂರಿನ ಮಹಾರಾಜ ಫ್ರೇಂವರ್ಕ್ಸ್ ಮೂಲಕ ಮದರಾಸಿನ Associated Printers ನಲ್ಲಿ ಮುದ್ರಣಗೊಂಡು ದೈವಿ ಪ್ರೀತಿಯ ಜನರನ್ನು ತಲುಪಿದವು. ಬೆಂಗಳೂರಿನ Sainath and company glass and picturemerchants, 342, ಚಿಕ್ಕಪೇಟೆ, ಇವರ ಮೂಲಕವೂ ಹಲವು ಪ್ರಿಂಟ್‌ಗಳು ಜನಮಾನಸವನ್ನು ತಲುಪಿದವು. ಇದು ರಾಜಾರವಿವರ್ಮನ ಕ್ಯಾಲೆಂಡರ್ ದೇವತೆಗಳ ಪರಂಪರೆಯ ಮುಂದುವರಿಕೆಯೇ ಆಗಿದೆ. ಓಲಿಯೋಗ್ರಾಫ್/ ಲಿಥೋಗ್ರಾಫ್ ಪ್ರಿಂಟ್‌ಗಳು ಇಡೀ ದೇಶವನ್ನು ಆಕ್ರಮಿಸಿಕೊಂಡಿದ್ದ ಕಾಲ ಅದು. ದೇವಾನುದೇವತೆಗಳು ಸುಲಭವಾಗಿ ಜನಸಾಮಾನ್ಯರ ಮನೆಗೆ, ನಂತರ ಅವರ ಮನಸ್ಸುಗಳಿಗೆ ಪ್ರವೇಶಿಸುತ್ತಿದ್ದರು. ಮೈಸೂರು ಅರಮನೆಯ ಅಂತಿಮಕೊಂಡಿಯಂತೆ ಕಾಣುತ್ತಿದ್ದ ವೈ. ಸುಬ್ರಹ್ಮಣ್ಯ ರಾಜುರವರು ಅರಮನೆಯ ಹೊರಗೆ ಬೆಂಗಳೂರಿನಲ್ಲಿ ನೆಲೆಸಿ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಮೂಲಕ ಎಂ.ಎಸ್. ನಂಜುಡರಾವ್‌ರವರ ಆಶಯದಂತೆ ಮೈಸೂರು ಚಿತ್ರಕಲೆಯನ್ನು ಹಲವರಿಗೆ ಕಲಿಸಿ ದೈವೀಕ ಕಲೆಯ ಪರಂಪರೆಯು ಮುಂದುವರೆಯಲು ಕಾರಣರಾದರು. ಹೇಗೂ ಅರಮನೆಯ ಪೋಷಣೆಯ ಕಲೆಯು, ದೈವೀಕತೆಗೆ ಆರಂಭದಲ್ಲಿ ಸೀಮಿತವಾಗಿದ್ದುದು ಮೊಗಲರ ಬ್ರಿಟೀಷ್‌ರ ಸಂದರ್ಭದಲ್ಲಿ ಕ್ಯಾಮರಾ ಕಾಣಿಸಿಕೊಳ್ಳುವುದಕ್ಕೂ ಮೊದಲು ಭಾವಚಿತ್ರ ಸೃಷ್ಟಿಗೂ ಒತ್ತು ನೀಡಿತು. ಪರಂಪರೆಯಿಂದ ನಮ್ಮ ಕುಶಲಿಗಳು, ಚಿತ್ರಕಾರರು, ಶಿಲ್ಪಿಗಳು ದೇವತೆಗಳನ್ನು ಮಾತ್ರ ಸೃಷ್ಟಿಸಬೇಕಾಗಿದ್ದ ಸಂದರ್ಭವು ಕ್ರಮೇಣ ಬದಲಾಯಿತು. ಸುತ್ತಲಿನ ಎಲ್ಲವನ್ನೂ ನಕಲು ಮಾಡುವ ಪ್ರವೃತ್ತಿಯನ್ನು ಕಲಾ ಪೋಷಕರು ತುಂಬಿದರು. ಬ್ರಿಟೀಷ್ ಭಾರತದ ಅಂದರೆ ವಸಾಹತುಶಾಹಿ ಸಂದರ್ಭ, ರಾಷ್ಟ್ರದ ಹಲವೆಡೆ ಅವರ ಅನುಕೂಲಕ್ಕಾಗಿ ಕಲಾಶಾಲೆಗಳನ್ನು ತೆರೆದು ನಮ್ಮವರಿಗೆ ಕಲೆಯನ್ನು ಕಲಿಸುವ ಉದ್ದೇಶದಿಂದ ಭಾರತದ ನಾಲ್ಕೂ ದಿಕ್ಕುಗಳಲ್ಲಿ ಕಲಾಶಾಲೆಗಳು ಆರಂಭಗೊಂಡವು.

**ಟಿಪ್ಪಣಿಗಳು :**

೧. ನೋಡಿ :
ಚಿತ್ರಸೂತ್ರ, ಅನು : ಆರ್ಯಆಚಾರ್ಯ ಪ್ರ : ಕಲಾಮಂಡಲ, ಧಾರವಾಡ. ಲಲಿತ ಕಲೆಗಳು, ಸಂಪುಟ : 16, ಸಂ: ಕೆ.ವಿ. ಸುಬ್ರಹ್ಮಣ್ಯಂ, ಲಲಿತ ಕಲೆಗಳು : ಪರಂಪರೆ ಮತ್ತು ಪಲ್ಲಟಗಳ ಮುಖಾಮುಖಿ, ಲೇ: ಕೆ.ವಿ.ಎಸ್. ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2015 ಪುಟ: 9.

೧A. ಆ ಸಂದರ್ಭದ ಕೆಲವು ನೋಟಗಳಿಗಾಗಿ ನೋಡಿ : ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು, 'ನಾನು ಕಂಡಂತೆ ನನ್ನ ಗುರುಗಳು,' ಲೇಖಕರು : ಸಿ. ಪರಮೇಶ್ವರಾಚಾರ್, ಸಂ : ಎನ್. ಮರಿಶಾಮಾಚಾರ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೧೯೯೯, ಪುಟ : ೩೪.

೨. ವಿವರಗಳಿಗೆ ನೋಡಿ :

ವೆಂಕಟಪ್ಪ : ಸಮಕಾಲೀನ ಪುನರವಲೋಕನ, ಲೇ: ಕೆ.ವಿ. ಸುಬ್ರಹ್ಮಣ್ಯ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೨೦೦೮, ಪುಟಗಳು : ೮೯–೯೧.

3. Coomarswamy and Nivedita, Myths of the Hindus and Buddhists, 1913.

೪. ಸಿ. ರಾಜಗೋಪಾಲಚಾರಿಯವರು ವೆಂಕಟಪ್ಪನವರನ್ನು ಭಾರತದTurner ಅಂತ ಕರೆದದ್ದುಂಟು.

"............. but he (turner) lacked the sensitiveness (in land scape painting) and the spiritual heritage that you posess and which may make your art great", ಎಂದು ಪತ್ರಿಸಿದ್ದಾರೆ. ನೋಡಿ : ವೆಂಕಟಪ್ಪ ಸಮಕಾಲೀನ ಪುನರವಲೋಕನ, ಲೇ: ಕೆ.ವಿ. ಸುಬ್ರಹ್ಮಣ್ಯ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ಪುಟ : ೮೯.

೫. ಮೈಸೂರಿಗೆ ಕ್ಯಾಮರಾ ಪ್ರವೇಶಿಸಿದ ನಂತರ ಜನರನ್ನು ಕಪ್ಪು ಬಿಳುಪು ಬಣ್ಣದಲ್ಲಿ ಕ್ಲಿಕ್ಕಿಸಿ ನಂತರ ಅದನ್ನು ಕುಂಚದಿಂದ ಅಗತ್ಯ, ಕೆಲವೇ ಬಣ್ಣಗಳನ್ನು ಲೇಪಿಸಿ ಸುಂದರಗೊಳಿಸುವ ಸ್ಟುಡಿಯೋಗಳು ಆರಂಭಗೊಂಡವಷ್ಟೆ. ಸಿದ್ಧಲಿಂಗ ಸ್ವಾಮಿಯವರ 'ಕೈಲಾಸ ಶಂಕರ' ರವಿವರ್ಮನ ಪ್ರೆಸ್ ಪ್ರಿಂಟ್‌ಗೆ ಬಹಳ ಬೇಡಿಕೆಯಿದ್ದಿತು. ಕ್ಯಾಮರಾ ಬರುವ ಹೊತ್ತಿಗೆ, ರವಿವರ್ಮ ಪ್ರೆಸ್‌ನ ಹಲವು ಸಮಸ್ಯೆಗಳ ನಡುವೆ ಸಿದ್ಧಲಿಂಗ ಸ್ವಾಮಿಯವರ 'ಕೈಲಾಸ ಶಂಕರ' ತೈಲ ವರ್ಣಕೃತಿಯನ್ನು ಕಪ್ಪು ಬಿಳುಪು ಛಾಯಾಚಿತ್ರವಾಗಿಸಿ, ಕುಂಚದಿಂದ ೩ ಬಣ್ಣಗಳನ್ನು ಲೇಪಿಸಿ ಜನರಿಗೆ ತಲುಪಿಸಲಾಯಿತು ! ೨೦೧೭ರ ಸಂದರ್ಭದಲ್ಲಿ ಈ ಹಾದಿಯ ಪ್ರಿಂಟ್‌ಗಳು ಈ ಲೇಖಕನನ್ನೂ ಒಳಗೊಂಡಂತೆ ಹಲವರ ಸಂಗ್ರಹಗಳಲ್ಲಿ ಇದ್ದವು.

ಸಿ.ಎಸ್. ದಂಡಾವತಿಮಠರವರ ಒಂದು ಕೃತಿ.
'ಕಾಶ್ಮೀರಿ ಭಿಕ್ಷುಕ', ಮಾಧ್ಯಮ : ಪೇಸ್ಟಲ್.



# 3. ವಸಾಹತುಶಾಹಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ರೋತ್ತರ ಸಂದರ್ಭದ ದೃಶ್ಯಧ್ಯಾನ

**(ಕ್ರಿ.ಶ. ಸುಮಾರು 19ನೆಯ ಶತಮಾನದ ಉತ್ತರಾರ್ಧ ಮತ್ತು 20ನೆಯ ಶತಮಾನದ ಪೂರ್ವಾರ್ಧ)**

ವಸಾಹತುಶಾಹಿ ಹಿನ್ನೆಲೆಯ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ರೋತ್ತರ ಸಂದರ್ಭದ ಕರ್ನಾಟಕದ ದೃಶ್ಯಕಲಾ ಲೋಕವು ನೆಲದ ಬಗೆಗಿನ ಪ್ರೀತಿಯ ಗ್ರಹಿಕೆಗಳಿಗೆ ತೀವ್ರತೆಯಿಂದ ತೆರೆದುಕೊಂಡಿತು. ವಿದೇಶೀ ದರ್ಪವನ್ನು ಪ್ರತಿಭಟಿಸುವ ಮನಸ್ಥಿತಿಯೂ ಕಲೆಯ ಮೂಲಕ ಕಾಣಿಸಿ ಕೊಂಡಿತು.

ವಸಾಹತುಶಾಹೀ, ಕಂಪನಿ ಚಿತ್ರಕಲೆಯ ಪ್ರಭಾವದಿಂದ ಮೈಸೂರು ಅರಮನೆಯಲ್ಲಿಯೂ ಆ ಪ್ರಭಾವದ ಕೃತಿಗಳು ಚಿತ್ರಿತಗೊಂಡು ಸಂಗ್ರಹಿಸಲ್ಪಟ್ಟಿವೆ. ಇಂಗ್ಲೆಂಡಿನ ವಿಕ್ಟೋರಿಯನ್ ಕಲೆಯ ಆದಿಪತ್ಯವನ್ನು ಅಪ್ಪಿಕೊಂಡಂತೆ ಮುಂಬಯಿ ಕೋಲ್ಕತ್ತ, ವಿಶಾಖಪಟ್ಟಣ ಹಾಗೂ ಮದ್ರಾಸಿನ ಕಲಾಶಾಲೆಗಳ ಗಾಳಿಯ ಬೀಸಿಗೆ ಬಗ್ಗಿ ದಕ್ಷಿಣ ಭಾರತದ ಕಲಾವಿದರು ಕಲಿತರಾದರೂ, ತಮ್ಮ ಪ್ರಾದೇಶಿಕ ಕಲಾ ಪ್ರಭಾವವನ್ನು ಅರಗಿಸಿಕೊಂಡೇ ಅಭಿವ್ಯಕ್ತಿಸಿದರು. ಇವರಲ್ಲಿ ನಮ್ಮ ನೆಲದ ಬಗೆಯ ಪ್ರೀತಿಯಂತೆಯೇ ದೈವದ ಅಭಿಮಾನವೂ ಇದ್ದಿತು. ಪರಂಪರೆಯ ಸೆಳೆತ; ಬದುಕುವ ಹಟ. ಮುಂಬಯಿಯ ಜೆ.ಜೆ. ಕಲಾಶಾಲೆಯಲ್ಲಿ ಕಲಿತು ಬಂದ ನಮ್ಮವರಲ್ಲಿ ಹಲವರು ಉತ್ತರ ಹಾಗೂ ಹೈದರಾಬಾದ್ ಕರ್ನಾಟಕದವರು. ಹಲವರಿಗೆ ಮಠಗಳ ಆಶ್ರಯ ದೊರೆತರೆ ಇನ್ನೂ ಕೆಲವರು ಬದುಕಲು ಬಸವಳಿದರು. ಬಹು ಹಿಂದೆಯೇ ಕೊಲ್ಕತ್ತೆಯ ಕಲಾ ಶಾಲೆಯಲ್ಲಿ ಕಲಿಯಲು ಹೋಗಿ ಸ್ವದೇಶೀ ಪ್ರೀತಿ, ಭಾರತೀಯ ಪರಂಪರೆಯ ಕಲೆಯ ಪುನರುಜ್ಜೀವನದಲ್ಲಿ ಪಾಲ್ಗೊಂಡು ಬಂದಿದ್ದ ಮೈಸೂರಿನ ಕೆ. ವೆಂಕಟಪ್ಪ ಸ್ಥಳೀಯ ಭೂ ದೃಶ್ಯಗಳೇ ಅಲ್ಲದೆ, ದೈವ ಪ್ರೀತಿಯ ಮೂಲದ ಭವ್ಯತೆಯ ಸೌಂದರ್ಯ ಅಭಿವ್ಯಕ್ತಿಯಲ್ಲಿ ತೊಡಗಿಕೊಂಡಿದ್ದವರೇ ಸರಿ. ಇದೇ ಸಂದರ್ಭದ ಮೈಸೂರಿನ ಸಿದ್ಧಲಿಂಗಸ್ವಾಮಿ ಯವರ ವಿಶಿಷ್ಟ ದೈವೀಕತೆಯ ಬಗ್ಗೆ ನಿಮಗೆಲ್ಲಾ ತಿಳಿದೇ ಇದೆ. ಉತ್ತರ ಕರ್ನಾಟಕದ ಹಲವಾರು ಕಲಾವಿದರು ಮಠಗಳ ಆಶ್ರಯದಲ್ಲಿ ಪುರಾಣಗಳ ಸಂಬಂಧಿತ ಕಲಾ ಸೃಷ್ಟಿಯಲ್ಲಿ ತೊಡಗಿದರೆ, ಕೆಲವರು ಸುತ್ತಲಿನ ಪ್ರಕೃತಿ ದೃಶ್ಯ ಪ್ರೀತಿಯ ಚಿತ್ರಣದಲ್ಲಿ ದೈವೀಕತೆಯನ್ನು ಕಂಡಂತಿದೆ. ಮಿಣಜಿಗಿಯವರು ಸಂಗೀತಗಾರರೂ ಆಗಿದ್ದು ರಾಗಮಾಲಾ ಚಿತ್ರಕೃತಿಗಳಲ್ಲಿ ಆನಂದ



ಜೆ.ಎಸ್.
ಖಂಡೇರಾವ್‌ರವರ ಒಂದು
ತೈಲವರ್ಣ ಕೃತಿ.



ಜೆ.ಎಸ್. ಖಂಡೇರಾವ್‌ರವರ
'ಸಮವಸರಣ', ತೈಲವರ್ಣ ಕೃತಿ.



ಕಮಡೋಳಿಯವರ
'ಕಾಶ್ಮೀರ' ಭೂದೃಶ್ಯ.
ಮಾಧ್ಯಮ : ತೈಲವರ್ಣ.

ಕಂಡುಕೊಂಡರೆ, ಡಿ.ಜಿ. ಬಡಿಗೇರ್(೧೯೦೨-೧೯೬೭) ಹಲವು ಹಾದಿಯ ಅಭಿವ್ಯಕ್ತಿಗಳ ಜತೆಗೆ ದೈವೀಕವಾದ ಕೃತಿಗಳನ್ನೂ ಚಿತ್ರಿಸಿದ್ದುಉಂಟು. ಇಲ್ಲಿ ಅವರ 'ವೀರಭದ್ರ ಅವತಾರ' ಗಮನಾರ್ಹ. ೧೯೩೦ರ ದಶಕದಲ್ಲಿ ಬೆಳಗಾವಿಯಲ್ಲಿ 'ಕರ್ನಾಟಕ ಆರ್ಟ್ ಸೊಸೈಟಿಯು ಡಿ.ಜಿ. ಬಡಿಗೇರರಿಂದ ಉದ್ಘಾಟನೆಗೊಂಡಿತು. ಸಿ.ಎಸ್. ದಂಡಾವತಿ ಮಠರವರು ೧೯೩೨ರಿಂದ೧೯೪೦ರ ವರೆಗೆ ಈ ಸೊಸೈಟಿಯ ಕಾರ್ಯದರ್ಶಿಗಳೂ ಆಗಿದ್ದರು. ಲಿಂಗಾಯತ ವೀರಶೈವ ಮಹಾಸಭಾದ ಆಶ್ರಯಗಳಲ್ಲಿ ಕಲಾಪ್ರದರ್ಶನಗಳು ನಡೆದವು.[೧] ಹುಬ್ಬಳ್ಳಿ, ಧಾರವಾಡಗಳಲ್ಲಿ ಮಿಣಜಿಗಿ, ಬಡಿಗೇರ, ಎಂ.ಎ.ಚೆಟ್ಟಿ, ಕಮಡೋಳಿಯವರುಗಳ ಚಿತ್ರಕೃತಿಗಳು ಪ್ರದರ್ಶಿತಗೊಂಡವು. ಡಿ.ವಿ. ಹಾಲಭಾವಿ ದೈವಮೂಲ ಅಭಿವ್ಯಕ್ತಿಯಲ್ಲಿ ತೀವ್ರತೆಯಿಂದ ತೊಡಗಿಕೊಂಡಂತೆ ಕಾಣುತ್ತಾರೆ. ಹರಿಹರನ 'ಗಿರಿಜಾಕಲ್ಯಾಣ', ಚಾಮರಸನ 'ಪ್ರಭುಲಿಂಗಲೀಲೆ', ಹಾಗೆಯೇ ಚೆನ್ನಬಸವಪುರಾಣ ಹಾಗೂ ಶಂಕರದಾಸೀಮಯ್ಯ ಮೊದಲಾದ ಹಲವು ಪುರಾಣಗಳಿಗೆ ಬಹುಸಂಖ್ಯೆಯ ಚಿತ್ರಕೃತಿಗಳ ಸೃಷ್ಟಿ ಪ್ರಕ್ರಿಯೆಯ ಮೂಲಕ ಅವರ ಸಂದರ್ಭದಲ್ಲಿ ವಿಶಿಷ್ಟತೆ ತಂದುಕೊಟ್ಟರು.

ಅಮೀನ್‌ಸಾಹೇಬ್‌ಕಮಡೋಳಿ (೧೯೦೦-೧೯೫೬) ಹಿಮಾಲಯದಲ್ಲಿ ಎರಡು ತಿಂಗಳು ಇದ್ದು ಅಲ್ಲಿನ ದೈವೀಕ ದೃಶ್ಯಸೌಂದರ್ಯವನ್ನು ಚಿತ್ರಿಸಿದವರು. 'ರಾವಣಜಟಾಯು,' 'ಮಾರ್ಕಂಡೇಯ' ಮೊದಲಾದ ಚಿತ್ರಕೃತಿಗಳನ್ನೂ ಅವರು ಚಿತ್ರಿಸಿದರು. ೧೯೨೦-೩೦ರ ಅವಧಿಯಲ್ಲಿಯೇ ಅವರು ಖ್ಯಾತಿಯು ಉತ್ತುಂಗಕ್ಕೇರಿದ್ದರು.

ಬಿ.ಆರ್. ಕಾಂಭೋಜ್ ೧೯೧೫ರ ಹೊತ್ತಿಗೇ ದೇವ ದೇವಿಯರ ಹಲವು ಕೃತಿಗಳಲ್ಲಿ ತಮ್ಮ ದೈವೀಕ ಪ್ರೀತಿಯನ್ನು ಬಿಂಬಿಸಿದ್ದರು. ಕಲ್‌ಬುರ್ಗಿಯ ಶರಣ ಬಸವೇಶ್ವರರ ಅವರ ಚಿತ್ರ / ಪ್ರಿಂಟುಗಳು ಬಹುಜನರ ಪ್ರೀತಿಗೆ ಪಾತ್ರವಾಗಿದ್ದವು. ೧೯೨೪ರ ಶರಣ ಬಸವೇಶ್ವರರ ಹಲವು ಪ್ರಿಂಟ್‌ಗಳು ಹಲವರಿಂದ ಆ ನಂತರ ಪ್ರಕಟಗೊಂಡವಾದರೂ ಇವರ ೧೯೨೪ರ ಚಿತ್ರಣದಲ್ಲಿ, ಹಿತಮಿತ ವರ್ಣ-ಛಾಯೆಗಳಲ್ಲಿ, ತಣ್ಣನೆಯ ಅನುಭವವು ಶರಣಬಸವೇಶ್ವರರತ್ತ ನೋಡುಗರ ಕಣ್ಣು, ಮನಸ್ಸುಗಳು ಕೇಂದ್ರೀಕೃತಗೊಳ್ಳುವಂತೆ ಮಾಡುತ್ತದೆ. ಹಾಗೆಯೇ ವ್ಹಿ.ಬಿ.ಸ್ವಾಮಿ (ಇಂಡಿಮಠ)ಯವರ 'ನೀಲಾಂಬಿಕಾದೇವಿ' ಚಿತ್ರಕೃತಿಯ ಗಮನ ಸೆಳೆಯುತ್ತದೆ. ಗದಗ್‌ನ ಎಂ.ಎ. ಚೆಟ್ಟಿಯವರು 'ಶಿವಶಿವೆ' ಮತ್ತು ಇತರ ದೇವತೆಗಳ, ಹಲವು ಪುರಾಣಗಳ ಸಂಬಂಧಿತ ಚಿತ್ರಿಸಿರುವ ೫೦೦ ಕ್ಕೂ ಹೆಚ್ಚು ವರ್ಣಚಿತ್ರಕೃತಿಗಳಲ್ಲಿ 'ಶಿವಾನುಭವ ಮಂಟಪ' ಎಂಬ ೬x೪ ಕೃತಿಯು ಬಹು ಜನರ ಮನಸ್ಸನ್ನು ಸೆಳೆದಿದೆ. ಎಡೆಯೂರು ಸಿದ್ಧಲಿಂಗೇಶ್ವರರ ವರ್ಣಚಿತ್ರವು ಪ್ರಿಂಟಾಗುವುದರ ಮೂಲಕ ಇಡೀ ರಾಜ್ಯದ ಜನರನ್ನು ತಲುಪಿದೆ; ಭಕ್ತಿಯ ಪಾರಮ್ಯದ ಅನುಭವವುದಕ್ಕಿದೆ.

ಎಂ.ಎ. ಚೆಟ್ಟಿಯವರ
'ಚನ್ನಬಸವೇಶನ ಮಹೋತ್ಸವ'.
ಮಾಧ್ಯಮ : ತೈಲವರ್ಣ

ಎಚ್.ಎಸ್. ಇನಾಮತಿಯವರ
ಒಂದು ಕೃತಿ
'ಆಲದ ಮರ'
ಮಾಧ್ಯಮ : ತೈಲವರ್ಣ



ಡಿ.ವಿ. ಹಾಲಭಾವಿಯವರ
'ಗಿರಿಜಾ ಕಲ್ಯಾಣ' ಕೃತಿ.
ಮಾಧ್ಯಮ : ತೈಲವರ್ಣ.

ವಿ.ಟಿ. ಕಾಳೆ ಯವರಿಂದಲೂ ಎಡೆಯೂರು ಸಿದ್ಧಲಿಂಗೇಶ್ವರರ ಪ್ರಿಂಟ್‌ವೊಂದು ಪ್ರಕಟಗೊಂಡಿದೆ. ಶರಣಬಸವೇಶ್ವರರ ಚಿತ್ರಕೃತಿಯೂ ಪ್ರಕಟವಾಗಿ ಜನಪ್ರಿಯವಾಗಿದೆ. ಕೃಷ್ಣಕತ್ರಿಯವರ ಕೆಲವು ಕೃತಿಗಳು ದೈವೀಕ ಅನುಭವ ನೀಡುವ ಉದ್ದೇಶಹೊಂದಿವೆ. ಎಸ್.ಎಂ. ಪಂಡಿತರು ಮುಂಬಯಿಯಲ್ಲಿ ಉಳಿದುಕೊಂಡು ಸ್ಟುಡಿಯೋದಲ್ಲಿ ಸೃಷ್ಟಿಸಿದ ದೇವಾನುದೇವತೆಗಳ ಕೃತಿಗಳು ಅಪಾರ ಜನರ ಪ್ರೀತಿಗಳಿಸಿದವು. ಅವರಿಂದ ಮೂಡಿಬಂದಿರುವ 'ಶ್ರೀರಾಮ ಕೃಷ್ಣ ಪರಮಹಂಸ', 'ಶ್ರೀಶಾರದಾ ದೇವಿ', ಭಾವ ಚಿತ್ರಗಳು ದೈವೀಕ, ಧ್ಯಾನ ನಿರತ ಭಕ್ತಿಯ ಅನುಭವವನ್ನು ನೀಡುತ್ತವೆ. ಅವರ ಕಾಳಿಕಾಮಾತೆಯ ಹಲವು ಕೃತಿಗಳು ದೇವಿಭಾಗವತದ ದೈವೀಕತೆಯ ಭವ್ಯತೆಯನ್ನು ಬಿಂಬಿಸುತ್ತವೆ. ರುಮಾಲೆ ಚೆನ್ನಬಸವಯ್ಯನವರು ತಮ್ಮ ಧ್ಯಾನ ಸಮಾಧಿ ಇತ್ಯಾದಿಗಳಿಂದ ದೈವೀಕ ಅನುಭವ ಲೋಕವನ್ನು ಸ್ಪರ್ಶಿಸುತ್ತಿದ್ದವರು.



ವಿ.ಟಿ. ಕಾಳೆಯವರ 'ಬನಶಂಕರಿ ದೇವಿ', ಕೃತಿ.

ಶಿವಬಾಲಯೋಗಿಗಳ ಆಶ್ರಮದ ಸಂಪರ್ಕವೂ ಅವರಿಗಿದ್ದಿತು. ಶಿವಬಾಲಯೋಗಿಗಳ ಭಾವಚಿತ್ರಣವು ಅಪೂರ್ವ ಭಕ್ತಿಯನ್ನು ಬಿಂಬಿಸುತ್ತದೆ. ಪ್ರಕೃತಿ ದೃಶ್ಯಲೋಕವನ್ನು ಧ್ಯಾನಿಸಿ ಚಿತ್ರಸುತ್ತಿದ್ದ ರೂಮಾಲೆ ಅದರಲ್ಲಿಯೇ ದೈವೀಕತೆಯನ್ನು ಅನುಭವಿಸಿದಂತೆ ಕಾಣುತ್ತಿದ್ದರು. ಎನ್. ಹನುಮಯ್ಯನವರ ಭೂ ದೃಶ್ಯಗಳ ಬೆಳಕಿನ ಆಟಗಳಲ್ಲಿ ದೈವೀಕತೆ ಇದೆ. ಶಂಕರಗೌಡ ಬೆಟ್ಟದೂರರು ಗಾಂಧಿಯ ಬದುಕನ್ನು ನವದೆಹಲಿಯ ಬಿರ್ಲಾಮಂದಿರದಲ್ಲಿ ಚಿತ್ರಿಸಿರುವವರು. ಕಾಯಕವೇ ಕೈಲಾಸ ಎಂಬಂತಿದ್ದ ಅವರು ಶಿವನನ್ನೂ ಪ್ರೀತಿಯಿಂದ ಚಿತ್ರಿಸಿದ್ದಾರೆ.

ಎಂ.ಟಿ.ವಿ. ಆಚಾರ್ಯರು ಎಸ್.ಎಂ. ಪಂಡಿತ್‌ರವರ ಪ್ರಭಾವಲಯಕ್ಕೆ



ಎ.ಎಸ್. ಪಾಟೀಲ್‌ರವರ 'ಅತಿಥಿ'(ದೈವೀಕ ನಾವು)
ಅರವಿಂದ ಆಶ್ರಮದ ಅಮ್ಮನ ಸಾಂಕೇತಿಕ
ರೂಪಕಲ್ಪನೆ: ಶ್ವೇತ ತಾವರೆ.

ಸೇರಿದವರು. ಅವರಿಂದ ಮೂಡಿದ ಪುರಾಣ ಭಾಗವತ ಮೊದಲಾದ ಮೂಲಗಳ ಕೃತಿಗಳು ದೈವೀಕ ಪ್ರಭೆಯಿಂದ ಕೂಡಿವೆ. ಅವರಿಗೆ ಕನಸಿನಲ್ಲಿ ಕಾಣಿಸಿಕೊಂಡ ಮೇಲುಕೋಟೆಯ ಚೆಲುವನಾರಾಯಣನ ಮೂಲ ಮೂರ್ತಿಯು ಜಲವರ್ಣಗಳಲ್ಲಿ ಚಿತ್ರಿಸುವಂತೆ ಮಾಡಿತು! ಇದೊಂದು ವಿಶಿಷ್ಟ ಸಂದರ್ಭವೇ ಸರಿ. ಹೇಗೆಂದರೆ ಶಿವರಾಮ ಕಾರಂತರ ಕಾದಂಬರಿಗಳ ಪಾತ್ರಗಳು ಅವರನ್ನು ಕನಸಿನಲ್ಲಿ ಕಾಡಿ ಬರೆಸಿಕೊಂಡಂತೆ. ಮೈಸೂರಿನ ಎಂ. ವೀರಪ್ಪನವರ 'ರಥೋತ್ಸವ'(೧೯೬೦) ತೈಲ ವರ್ಣ ಕೃತಿಯು ಜನರ ಭಕ್ತಿಯ ಪಾರಮ್ಯವನ್ನು ಬಿಂಬಿಸುತ್ತದೆ. ಕಲ್ಬುರ್ಗಿಯ ಎಸ್.ಎನ್. ಅಳಂದ್‌ಕರ್‌ರವರಿಂದ ಮಂತ್ರಾಲಯದ ರಾಘವೇಂದ್ರರ ಒಂದು ಪ್ರಿಂಟ್ ಪ್ರಕಟವಾಗಿದೆ. ಪ್ರಸ್ತುತ ಅಪರೂಪವಾಗಿರುವ ಈ ಕೃತಿಯು ೧೯೬೧ರ ಸಂದರ್ಭದಲ್ಲಿ ಹೆಚ್ಚು ಹೆಚ್ಚು ಜನರ ಮನೆ ಮನಗಳಿಗೆ ತಲುಪಿ ಪೂಜಿಸಿಕೊಂಡಿದೆ.

ಸಿದ್ಧಲಿಂಗಸ್ವಾಮಿಯವರಲ್ಲಿ ಕಲಿತು ಚಿತ್ರಿಸಿದ ಸುಭಾಷಿಣಿದೇವಿ(೧೯೨೦–೨೦೦೨) ಸಹಜವಾಗಿಯೇ ದೈವೀಕತೆಗೆ ಹತ್ತಿರವಾಗಿ ಚಿತ್ರಿಸಿದವರು. ಅವರ ಜಲವರ್ಣಗಳ 'ಗಿರಿಜಾಶಂಕರ', 'ಪಾರ್ವತಿ ತಪ ಪರೀಕ್ಷೆ'(೧೯೫೩) ಹಾಗೂ 'ಮಹಿಷಾಸುರ ಮರ್ಧಿನಿ', 'ಲಕ್ಷ್ಮಿ', 'ಸರಸ್ವತಿ', 'ಗಜಾಸುರ ಸಂಹಾರಿಶಿವ' ಈ ಹಿನ್ನೆಲೆಯಲ್ಲಿ ಗಮನಿಸು ವಂತಿವೆ. ರಘೋತ್ತಮ ಪುಟ್ಟಿ (೧೯೧೪–೨೦೦೬) ವಿಶಿಷ್ಟ ಭಾವಚಿತ್ರಗಳಿಗಾಗಿ ಖ್ಯಾತರು. ವಿಶೇಷವೆಂದರೆ ಅವರು ಜೈನರ ದರ್ಶನ ಗ್ರಂಥ 'ಪದಾರ್ಥಸಾರ' ಗ್ರಂಥವನ್ನು ಅರಗಿಸಿಕೊಂಡು ಚಿತ್ರಿಸಿರುವ ಹಲವು ಚಿತ್ರಕೃತಿಗಳು ಜೈನತಾತ್ವಿಕ ದೈವದರ್ಶನದಂತಿವೆ. ಸುಮಾರು ಕ್ರಿ.ಶ. ೧೨೬೦ರಲ್ಲಿದ್ದ ಮಾಘಣಂದಿಯು ಈ ಗ್ರಂಥದ ಕರ್ತೃ. ರಘೋತ್ತಮ ಪುಟ್ಟಿ ಈ ಗ್ರಂಥಕ್ಕಾಗಿ 'ಷಡ್‌ಲೇಶ್ಯಾ ದರ್ಶನ', 'ಶ್ರೀ ಶ್ರುತ ಸ್ಕಂದಯಂತ್ರಂ', 'ಅರ್ಹತ್ವಪರಮೇಷ್ಠಿಗಳು,' 'ಸಿದ್ಧ ಪರಮೇಷ್ಠಿಗಳು', 'ಆಚಾರ್ಯ ಪರಮೇಷ್ಠಿಗಳು', 'ಸರ್ವಸಾಧು ಪರಮೇಷ್ಠಿಗಳು', ಮತ್ತು ಬಹಳ ಮುಖ್ಯವಾಗಿ 'ಭಗವಾನ್ ಮಹಾವೀರರ ಸಮವಸರಣ ದೃಶ್ಯ' ಲೋಕವನ್ನು ಚಿತ್ರಿಸಿದ್ದಾರೆ. ಅದೊಂದು ಅಪೂರ್ವ ದೈವೀಕ ದೃಶ್ಯಲೋಕ.[೨] ಪಿ.ಆರ್. ತಿಪ್ಪೇಸ್ವಾಮಿಯವರ ಬಹುತೇಕ ಭೂದೃಶ್ಯಗಳು ದೇವಾಲಯ ಪರಿಸರಗಳನ್ನೇ ಅವಲಂಬಿಸಿ ಚಿತ್ರತಗೊಂಡಿವೆ. ಮೈಸೂರಿನ ಮುಕ್ತಾವೆಂಕಟೇಶ್ (೧೯೦೨–೨೦೦೩) ಪ್ರಕೃತಿ ಸೃಷ್ಟಿಯ ನಗುವಿನಂತೆ ಹೂಗಳ ಚಿತ್ರಣದಲ್ಲಿಯೇ ಧ್ಯಾನಸ್ಥರಾಗಿ ತೊಡಗಿಕೊಂಡಿದ್ದವರು. ಬಾಯಿರಿಯವರ ವಿಶಿಷ್ಟ ಕಲಾಭಿವ್ಯಕ್ತಿಯು 'ರಂಗೋಲಿ' ಪ್ರಕಾರದಲ್ಲಿಯೂ ಕಾಣಿಸಿಕೊಂಡಿದೆ. ಈ 'ಯಂತ್ರ' ಮೂಲದ ಕಲಾಭಿವ್ಯಕ್ತಿಯ ನಡುವೆ ದೈವೀಕತೆಯ ಹಲವು ಕೃತಿಗಳು ಮೂಡಿಬಂದಿವೆ. ಜೆ.ಎಸ್. ಖಂಡೇರಾವ್‌ರವರು ಬಸವ ಸಮಿತಿಯವರಿಗಾಗಿ ಹಲವು ಕೃತಿಗಳನ್ನು ಚಿತ್ರಿಸಿಕೊಟ್ಟಿದ್ದಾರೆ. ಎ.ಎಸ್. ಪಾಟೀಲರು ಅರವಿಂದರ ದೈವೀಕ ಪ್ರಭಾಭವ್ಯತೆಯಲ್ಲಿ

ಮಿಂದವರು. ಹಾಗಾಗಿ ಅವರ ಹಲವು ಕೃತಿಗಳು, ವಿಶೇಷವಾಗಿ 'ಅತಿಥಿ' (ದೈವೀಕ ನಾಮ) ಶ್ವೇತತಾವರೆಯೊಂದಿಗೆ ಪಾಂಡಿಚರಿಯ ಅರವಿಂದರ ಆಶ್ರಮದ ಶ್ರೀಮಾತೆಯ ಸಾಂಕೇತಿಕ ರೂಪದ ಕೃತಿಯು ಗಮನಾರ್ಹ. ಈ ಎಲ್ಲರ ಹಲವು ಅಭಿವ್ಯಕ್ತಿಗಳು ಬಹುತೇಕ ಚೌಕಟ್ಟಿನ ನಡುವೆಯೂ ಚೌಕಟ್ಟಿಲ್ಲದ, ಜಾತಿ, ಧರ್ಮಗಳನ್ನು ಮೀರಿದ ದೈವೀಕತೆಯ ಅನುಭವಲೋಕಕ್ಕೆ ತೆರೆದ ಬಾಗಿಲಿನಂತೆ ಕಾಣುತ್ತವೆ. ಹಾಗೆ ನೋಡಿದರೆ ಈ ಸಂದರ್ಭದ ನಮ್ಮ ಎಲ್ಲ ಸಂಪ್ರದಾಯ ಶಿಲ್ಪಿಗಳೂ ದೇವಾಲಯ ಶಿಲ್ಪ, ವಾಸ್ತುಶಿಲ್ಪ, ರಥಶಿಲ್ಪಗಳ ಮೂಲಕ ದೈವೀಕತೆಗೆ ಪೂರಕವಾದ ಮನಸ್ಥಿತಿಯನ್ನು ಸಾಧಿಸಿ ಸೃಷ್ಟಿಸಿದವರೇ ಆಗಿದ್ದಾರೆ.

**ಟಿಪ್ಪಣಿಗಳು :**

1. ವಿವರಗಳಿಗೆ ನೋಡಿ :
   D.V. Halabhavi, 1968 My contemporary artists, Dharwar.
೨. ಚಿತ್ರಗಳಿಗಾಗಿ ನೋಡಿ. ಶ್ರೀ ಮಾಘಣಂದಿ ಕೃತ ಪದಾರ್ಥಸಾರ (ಭಾಗ–೨) ಸಂ: ಎಂ.ಸಿ. ಪದ್ಮನಾಭ ಶರ್ಮ

ಪ್ರ : ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ೧೯೭೨.

●

ವೀರಪ್ಪನವರ 'ರಥೋತ್ಸವ' ಕೃತಿ. ಮಾಧ್ಯಮ: ತೈಲವರ್ಣ, ೧೯೬೦.






ಎಸ್,ಎಂ. ಪಂಡಿತ್‌ರವರ ಒಂದು ಪ್ರಿಂಟ್.
'ಶ್ರೀರಾಮಕೃಷ್ಣ ಪರಮಹಂಸ', ೧೯೭೧.
(ಕೃಪೆ : ಕೊಲ್ಕತ್ತೆಯ ರಾಮಕೃಷ್ಣ ಆಶ್ರಮ)



ಬಿ.ಪಿ. ಬಾಯಿರಿಯವರ ಒಂದು ಪ್ರಿಂಟ್.
'ಶ್ರೀ ಮೂಕಾಂಬಿಕಾ',
ಮಾಧ್ಯಮ : ತೈಲವರ್ಣ.



ಸಂತ ಶುಭರಾಯರ
ಒಂದು ಕೃತಿ 'ರಾಧಾಕೃಷ್ಣ'
ಮಣ್ಣಿನ ಬಣ್ಣಗಳ ಕೃತಿ.
೧೯ನೆಯ ಶತಮಾನ.



ಕಲ್ಬುರ್ಗಿಯ ಅಳಂದ್ಕರ್‌ರವರ
ಒಂದು ಪ್ರಿಂಟ್. 'ರಾಘವೇಂದ್ರ'.



ಡಿ.ವಿ. ಹಾಲಭಾವಿಯವರ 'ಗಿರಿಜಾಕಲ್ಯಾಣ'. ಮಾಧ್ಯಮ : ತೈಲವರ್ಣ.

ಎಂ.ಎ. ಚೆಟ್ಟಿಯವರ ಒಂದು ಕೃತಿ. 'ಚನ್ನಬಸವೇಶ್ವರ ಪುಷ್ಪಕೋತ್ಸವ'. ತೈಲವರ್ಣ ಕೃತಿ.





ಸಿದ್ದಲಿಂಗಸ್ವಾಮಿಯವರ 'ಶಿವ ಪಾರ್ವತಿ',
ದಶತಾಲ (ದೊಡ್ಡದು).



ಡಿ.ಜಿ. ಬಡಿಗೇರ್‌ರವರ
'ವೀರಭದ್ರಾವತಾರ',
ತೈಲವರ್ಣ ಮಾಧ್ಯಮ.



ಯಶವಂತ ಹಿಬಾರೆಯವರ 'ಧ್ಯಾನಸ್ಥ
ಬಸವಣ್ಣ', ಮಾಧ್ಯಮ : ತೈಲವರ್ಣ.

ಕಲ್ಬುರ್ಗಿಯ 'ಶರಣ ಬಸವೇಶ್ವರ', ಬಿ.ಆರ್. ಕಾಂಬೋಜ್‌ರವರ ಒಂದು ಪ್ರಿಂಟ್.





ಎಂ.ಎ. ಚೆಟ್ಟಿಯವರ ಒಂದು ಕಲಾಕೃತಿ. ಮಾಧ್ಯಮ : ತೈಲವರ್ಣ.



ಬಾದಾಮಿಯ ಮೂರನೆಯ ಗುಹೆಯ ಭಿತ್ತಿಚಿತ್ರ, ಮಿಣಜಿಗಿಯವರು ನಕಲು ಮಾಡಿದ್ದು.



ಬಿ.ಆರ್. ಕಾಂಬೋಜ್(ಕೋಟ್ಯಾಳ್ಕರ್)ರವರ ಒಂದು ಪ್ರಿಂಟ್.



ಧಾರವಾಡದ ಡಿ.ವಿ. ಹಾಲಭಾವಿಯವರ ಒಂದು ತೈಲವರ್ಣ ಕೃತಿ.



ಮೈಸೂರಿನ ಮುಕ್ತಾ ವೆಂಕಟೇಶ್ (೧೯೦೨–೨೦೦೩) ಅವರ ಒಂದು ತೈಲವರ್ಣ ಕೃತಿ. ಇದು ರಾಮ್‌ಸನ್ಸ್ ಸಂಗ್ರಹದ ಕೃತಿ.



ಅರಮನೆಯ ಕಲಾವಿದ ಪ್ರೊ.
ಸುಬ್ರಹ್ಮಣ್ಯರಾಜುರವರು ಮೊದಲ ವಿಶ್ವಕನ್ನಡ
ಸಮ್ಮೇಳನದ ಶಿಬಿರ, ಮೈಸೂರಿನಲ್ಲಿ ಚಿತ್ರಿಸಿದ
ಕೃತಿ. 'ಮೋಹಿನಿ' ಮಾಧ್ಯಮ : ಮಿಶ್ರ.

# 4. ಆಧುನಿಕ ಸಂವೇದನಾಶೀಲ ದೃಶ್ಯಧ್ಯಾನ

(ಕ್ರಿ.ಶ. ಸುಮಾರು 20ನೆಯ ಶತಮಾನದ ದ್ವಿತೀಯಾರ್ಧ)

ನಾವು ಸ್ವಾತಂತ್ರ್ಯದ ಬೆಳಕಿನಲ್ಲಿ ಕಂಡುಕೊಂಡ ಆಧುನಿಕತೆಯು ವಸಾಹತುಶಾಹೀ ಹಂಗಿನ ಅರಮನೆಯೇ ಆಗಿದ್ದಿತು. ಆದರೂ ನಮ್ಮ ಶ್ರೀಮಂತ ಪರಂಪರೆಯ ಸಾಮರ್ಥ್ಯದಿಂದ ಅಂದಿನ ಹೊಸ ಸಂದರ್ಭವು ಹಲವು ಆಶೋತ್ತರಗಳ ಜೀವಧ್ವನಿಯಾಗಿಯೂ ಉತ್ತೇಜಿಸಿದ್ದು ಸಹಜವೇ ಆಗಿತ್ತು. ದೇಶದ ಹಲವೆಡೆಯ ಕಲಾಶಾಲೆಗಳು ಆರಂಭಗೊಂಡುದು ಬ್ರಿಟೀಷ್ ವಸಾಹತುಶಾಹಿ, ಕಂಪನಿ ಚಿತ್ರಕಾರರ ಪರಂಪರೆಗೆ ಭಾರತೀಯ ಚಿತ್ರಕಾರರನ್ನು ಸಜ್ಜುಗೊಳಿಸುವ, ಉದ್ದೇಶದಿಂದಲೇ ಆದರೂ, ನಮ್ಮವರು ಅಲ್ಲಿನ ಕುಶಲ ತಾಂತ್ರಿಕ ಪರಿಣತಿಯನ್ನು ವೈಯಕ್ತಿಕ ಅಭಿವ್ಯಕ್ತಿಗೂ ದುಡಿಸಿಕೊಂಡದ್ದು ಗಮನಾರ್ಹ. ಆದರೆ ಪಶ್ಚಿಮ ಮತ್ತು ಯೂರೋಪಿಯನ್ ಕಲಾವಿದರಂತೆ ಹಿಂದಿನ ನಡೆಯನ್ನು ಪ್ರಶ್ನಿಸಲು, ಧಿಕ್ಕರಿಸಲು, ಸವಾಲಾಗಿ ಎದುರಿಸಲು ಅಲ್ಲ: ಒಂದು ರೀತಿಯ ಪ್ರತಿಕ್ರಿಯೆಯಂತೆ. ಅಂದರೆ ಹಿಂದಿನ ಅಂದಿನ ಸಂದರ್ಭದ ಅನುಭವಗಳ ಸೃಷ್ಟಿಪ್ರಕ್ರಿಯೆಗಳಿಗೆ ಪ್ರತಿಕ್ರಿಯಾತ್ಮಕವಾಗಿ ಮೂಡಿಬಂದ ಹೊಸತನ ಅದು. ಅನುಕರಣೆ ಮೀರಿ ಹೊಸರೂಪಗಳ ಸೃಷ್ಟಿಶೀಲತೆ ಅದು. ಅರಮನೆಯ ಪೋಷಣೆ, ಪರಂಪರೆಯ ಕೆ. ವೆಂಕಟಪ್ಪ (೧೮೮೭–೧೯೬೫) ಮೈಸೂರಿಗೆ ಕೊಲ್ಕತ್ತೆಯಿಂದ ಹಿಂತಿರುಗಿ ಬಂದ ನಂತರ ಪುನರುಜ್ಜೀವನ ಸಂದರ್ಭದ ಪ್ರಭಾವಮೀರಿದಂತೆ ಕಾಣಿಸಿಕೊಂಡರು. ಪಶ್ಚಿಮ ಮತ್ತು ಯೂರೋಪಿನ ಚಿತ್ರ, ಶಿಲ್ಪಗಳ ಬಗ್ಗೆ ವಿಸ್ತಾರಗೊಂಡ ಅವರ ಆಸಕ್ತಿಯು ಯೂರೋಪಿನ ಶಿಲ್ಪ ಮಾಧ್ಯಮದ ಸೃಷ್ಟಿಶೀಲತೆಯನ್ನು ಅಲ್ಲಿಯೇ ಕಲಿಯಲು ಉದ್ದೇಶಿಸಿದ್ದು ಉಂಟು; ಇರಲಿ. ಆದರೆ ಹೊಸತನದ ಸೃಷ್ಟಿಗೆ ತುಡಿತವಿದ್ದುದರಿಂದಲೇ (೧೯೨೨) ಅವರಿಂದ ರವೀಂದ್ರನಾಥ ಠಾಕೂರರ ವಿಶಿಷ್ಟ ಭಾವಶಿಲ್ಪವು ಮೂಡಿಬಂದದ್ದು. ಆ ಹೊತ್ತಿಗೆ ಮೈಸೂರಿನಲ್ಲಿ ಭಾವಚಿತ್ರ, ಭಾವಶಿಲ್ಪ ಪರಂಪರೆಯು ಆರಂಭಗೊಂಡಿತ್ತು. ರಾಜಾರವಿವರ್ಮನ ಭಾವಚಿತ್ರ ಮಾಂತ್ರಿಕತೆಯೇ ಅಲ್ಲದೆ ದೇಶೀ ವಿದೇಶೀ ಶಿಲ್ಪಿಗಳನೇಕರು ಅಲ್ಲಿನ ಹಲವು ಭಾವಶಿಲ್ಪಗಳನ್ನು ರೂಪಿಸಿದ್ದರು. ಈ ನಡುವೆ ಕೊಡಗಿನ ಶಿಲ್ಪಿ ಪೊನ್ನಪ್ಪ ರಾಜಾರಾಮ್ ಆ ಸಂದರ್ಭದ ಹೊಸ ಪೀಳಿಗೆಯ ಹಲವರಂತೆ ಬಹುತೇಕ ದೇವ–ದೇವಿಯರ ಚಿತ್ರ–ಶಿಲ್ಪ ಸೃಷ್ಟಿಗಳಿಗೆ ಬದಲಾಗಿ ಪಶ್ಚಿಮದ ಸುಂದರ–ರಮ್ಯ ಸಂವೇದನಾ ಪ್ರಭಾವೀ ಸೃಷ್ಟಿಗಳಿಗೆ ಕಾರಣರಾದರು. ಸ್ವಾತಂತ್ರ್ಯ ಪೂರ್ವದಲ್ಲಿ

ಅಂದಿನ ಬಹುತೇಕರಂತೆ ಗ್ರಾಮೀಣ, ಜನಪದೀಯ ಸಂವೇದನಾಶೀಲ ರೇಖೆ-ಬಣ್ಣಗಳಲ್ಲಿ ಅಭಿವ್ಯಕ್ತಿಸುತ್ತಿದ್ದ ಕೆ.ಕೆ. ಹೆಬ್ಬಾರ್, ಸ್ವಾತಂತ್ರ್ಯ ನಂತರ ಆ ಹಿಂದಿನ ರಮ್ಯ ಸಂವೇದನೆಯಿಂದ ಬಿಡುಗಡೆಗೊಂಡು, ಹೊಸ ಜೀವಧ್ವನಿಯ ರೇಖೆ-ರೂಪ-ಬಣ್ಣಗಳಿಂದ ಮುಗ್ಧ ಮಕ್ಕಳ ರೇಖಾಮೀಮಾಂಸೆಯ ಪ್ರೌಢ ಪ್ರತಿನಿಧಿಯಂತೆ ಸೃಷ್ಟಿ ಪ್ರಕ್ರಿಯೆಯಲ್ಲಿ ತಲ್ಲೀನರಾದರು. ಸುತ್ತಲಿನ ಬದುಕಿನ ಸಾಂಕೇತಿಕ ಅಭಿವ್ಯಕ್ತಿಯಂತೆ ಅವರ ತೈಲವರ್ಣ ಚಿತ್ರಕೃತಿಗಳು ಕಾಣಿಸಿಕೊಂಡವು. ೧೯೪೯ ಮತ್ತು ಆ ನಂತರದ Beggers, Hunger, Sweeper, Atrocity, Shelter, Refugeese, The Holocaust Flood, ಹೀಗೆ ಭಾರತೀಯ ಬದುಕಿನ ಕಿತ್ತುತಿನ್ನುವ ಬಡತನದ ಬೇಗೆ, ಪ್ರಕೃತಿಯ ವಿಕೋಪಗಳನ್ನು ಚಿತ್ರಿಸಿದರು. ನಂತರದ ದಶಕಗಳಲ್ಲಿ ಅವರಿಂದ ಪಕ್ವಗೊಂಡ ಮನಸ್ಥಿತಿ ಅಥವಾ ಪ್ರಕೃತಿಯ ಸತ್ಯದ ದರ್ಶನದಂತೆ ಪಂಚಭೂತಗಳು, ಹುಟ್ಟು-ಸಾವು ಇತ್ಯಾದಿ ವಿಶಿಷ್ಟ ಸತ್ವದ ದೃಶ್ಯ ಲೋಕಗಳೂ ಕಾಣಿಸಿಕೊಂಡವು. ಇವೆಲ್ಲ 'ಅಸ್ಪಷ್ಟತೆ'ಯ ರೂಪ ಮೀಮಾಂಸೆಯ ಉದಾಹರಣೆಗಳಂತೆ, ಕೆಲವೊಮ್ಮೆ ಬಣ್ಣಗಳ ಸಾಂಕೇತಿಕತೆಯೊಂದಿಗೆ ಅಭಿವ್ಯಕ್ತಗೊಂಡಿ ರುವುದೂ ವಿಶೇಷವೇ ಆಗಿದೆ. ಈ ಎಲ್ಲ ವೈವಿಧ್ಯ ವೈರುಧ್ಯಮಯತೆಯು ಯಾವುದೇ ನಿಜವಾದ ಕಲಾವಿದ / ಕಲಾವಿದೆಗೆ ಸಹಜವಾಗಿ ಇರಲೇಬೇಕಾದ ಲಕ್ಷಣವಾದರೂ ದೈವೀಕತೆಯ ಪ್ರಜ್ಞಾಪ್ರವಾಹವು ಅವರ ಬಾಲ್ಯದ ಅವರೊಳಗಿನ ಚಿತ್ರಕಾರನನ್ನು ಅಲುಗಾಡಿಸಿದಂತೆ ಪಕ್ವ ಹೆಬ್ಬಾರರನ್ನೂ ಕಾಡಿದ್ದು ಅಸಂಗತವೇನೂ ಅಲ್ಲ. ತುಳಸೀದಾಸರ ಬದುಕನ್ನು ಹೆಬ್ಬಾರರು ಸಾಂದರ್ಭಿಕ ರೇಖಾ ಚಿತ್ರಗಳನ್ನು ರೇಖಿಸಿ ಸಂತೋಷಿಸಿದ್ದು ಗಮನಾರ್ಹ.

ಮಿಣಜಿಗಿಯವರ ಆವರಣದಿಂದ ಮೂಡಿಬಂದು ಬಯಲು ಆಲಯದಂತೆ ಬೆಳೆದ, ಇತರರನ್ನು ಬೆಳೆಸಿದ ಆರ್.ಎಂ. ಹಡಪದ್‌ರವರ ಕಲಾಪ್ರಜ್ಞೆಯು ಮೂಲಭೂತವಾಗಿ ಸಾಂಪ್ರದಾಯಿಕ ಪ್ರಭೆಯಿಂದ ಪ್ರೇರಿತಗೊಂಡದ್ದು. ಬಾದಾಮಿ ಪರಿಸರದ ರಾಷ್ಟ್ರಕೂಟ, ಚಾಲುಕ್ಯರ ಶಿಲ್ಪ, ದೇವಾಲಯ ಶಿಲ್ಪಗಳು, ವಿಶಿಷ್ಟ ಭಿತ್ತಿ ಚಿತ್ರ, ಐತಿಹಾಸಿಕ ಪ್ರಜ್ಞೆಯ ಭೂ ದೃಶ್ಯಗಳು ಅವರನ್ನು ಕಾಡಿ ಚಿತ್ರಿಸುವಂತೆ ಮಾಡಿವೆ. ಅವರ ದೇವದೇವಿಯರ ರೇಖಾಶಿಲ್ಪಗಳು ಸತ್ವಯುತವಾಗಿ ಮೂಡಿಬಂದಿವೆ. ಭೂ ದೃಶ್ಯಗಳಲ್ಲಿ ಆ ಆವರಣದ ಸತ್ವವು ಮಾಂತ್ರಿಕತೆಯಿಂದ ಸೆರೆಹಿಡಿಯಲ್ಪಟ್ಟಂತೆ ಗ್ರಹಿಸಲ್ಪಟ್ಟಿದೆ.

ಎಚ್.ಎಸ್. ಇನಾಮತಿ (೧೯೯೦-೧೯೮೭) ತಮ್ಮ ಹಲವು ಕೃತಿಗಳಲ್ಲಿನ ಅವಕಾಶವನ್ನು(Space) ಅವರ ಮನದಾಳದ ಭೂಪಠದಂತೆ ದುಡಿಸಿಕೊಂಡಿದ್ದಾರೆ. ಅದು Sublime ಮತ್ತು Spirutual ಗೆ ಹತ್ತಿರದ ಅಭಿವ್ಯಕ್ತಿ. ೧೯೫೦ರ ದಶಕದ ಅವರ ಭೂದೃಶ್ಯಗಳಲ್ಲಿ ಈ ಅಂಶವನ್ನು ಅನುಭವಿಸಬಹುದು. ಅವರ 'ದೊಡ್ಡ ಆಲದ ಮರ' ಕೃತಿಯು ಒಂದು ಉದಾಹರಣೆ ಅಷ್ಟೆ.

ಕೆ.ಕೆ. ಹೆಬ್ಬಾರರ The Holocaust ಕೃತಿ.
ಮಾಧ್ಯಮ : ತೈಲವರ್ಣ.



ಕ್ರಾಂತಿಕಾರಿಯ ಒಡಲಾಳದಂತೆ ಕಾಣುತ್ತಿದ್ದ ಆರ್.ಎಸ್. ನಾಯ್ಡು (೧೯೦೬-೧೯೮೫) ಬಹುತೇಕರಂತೆ ದೈವವನ್ನು ಧಿಕ್ಕರಿಸಲಾರದೆ ತೊಳಲಾಡಿದಂತೆಯೂ ಕಾಣಿಸಿಕೊಂಡರು. ಹೀಗಾಗಿಯೇ ಕೈಲಾಸಂರವರು ಅಕ್ಷರಸಾಹಿತ್ಯವನ್ನು ದುಡಿಸಿಕೊಂಡಂತೆ ನಾಯ್ಡುರವರು ರೇಖೆಗಳನ್ನು ದುಡಿಸಿಕೊಂಡರು; ಮಾರ್ಕ್ಸಿಂಗಾರ್ಕಿ, ಬರ್ನಾಡ್ ಷಾ, ಲೆನಿನ್ ಭಾವಶಿಲ್ಪಗಳ ಜತೆಜತೆಗೇ ಗಾಂಧಿ, ಬುದ್ಧ, ಶಿವ, ಕ್ರಿಸ್ತ ಮೊದಲಾದ ಉಬ್ಬುಶಿಲ್ಪಗಳೂ ಮೂಡಿಬಂದವು.!

ಪೀಟರ್ ಲೂಯಿಸ್ ಅರೆ-ನೈಜತೆ ಅಥವಾ ಎಕ್ಸ್‌ಪ್ರೆಷನಿಸಂ ನಿರ್ವಹಣಾ ಕಲಾ ಮೀಮಾಂಸೆಗೆ ಪೂರಕವಾಗಿ ಅಭಿವ್ಯಕ್ತಿಸಿದ್ದಾರೆ. ನಮ್ಮ ಪರಂಪರೆಯೇ ಅಲ್ಲದೆ ಬ್ರಿಟೀಷ್ ಕಲಾಶಾಲೆಗಳನ್ನು ಧಿಕ್ಕರಿಸುವಂತೆ ಬಣ್ಣ, ರೇಖೆ-ರೂಪಗಳನ್ನು ಅರೆ-ಬರೆಯಾಗಿ ಆದರೆ ಪೂರ್ಣರೂಪ, ಪೂರಕ ದೃಶ್ಯ ಸೃಷ್ಟಿಶೀಲತೆಯಿಂದ ಸಂಯೋಜಿಸುತ್ತಾರೆ. ಸುತ್ತಲಿನ ಬದುಕಿನ ಎಲ್ಲವೂ, ಕಡಲ ತೀರದ ಬದುಕಿನ ಎಲ್ಲ ಮುಖಗಳೂ ಇವರ ಕೃತಿಗಳಲ್ಲಿ ಅವರದೇ ಆದ ರೀತಿಯಲ್ಲಿ ಅಭಿವ್ಯಕ್ತಗೊಂಡಿವೆ. ಹಾಗೆ ನೋಡಿದರೆ ಪೀಟರ್ ಲೂಯಿಸ್‌ರವರ ಕೃತಿಗಳು ವಿಕೃತ ಸೌಂದರ್ಯ ಮೀಮಾಂಸೆಯ ಮೂಸೆಯಲ್ಲಿ ಮೂಡಿಬಂದ ವಿಶಿಷ್ಟ ಕೃತಿಗಳು; ಅನನ್ಯವೂ ಆಗಿವೆ. Cock fight/ ಕೋಳಿ ಹುಂಜಗಳ ಕಾದಾಟದ ಅವರ ಕೃತಿಯೊಂದು ಇದೇ ವಸ್ತುವಿನ ಕೆ.ಕೆ. ಹೆಬ್ಬಾರ್, ಎಂ.ಬಿ. ಪಾಟೀಲ್ ಮತ್ತಿತರರ ಕೃತಿಗಳೊಂದಿಗೆ ವಿಶಿಷ್ಟ ವಿಭಿನ್ನತೆಯಿಂದ ಕಾಣುವುದಕ್ಕೆ ಅವರು 'ವಿಕೃತಿ ಸೌಂದರ್ಯ ಮೀಮಾಂಸೆ'ಯನ್ನು ಅರಗಿಸಿಕೊಂಡು ಚಿತ್ರಿಸಿರುವುದೇ ಆಗಿದೆ. ಪೀಟರ್ ಲೂಯಿಸ್‌ರವರ ಜನರೂ ಅಷ್ಟೆ: ಕರಾವಳಿಯ ಕಪ್ಪು ಬಣ್ಣದ ಎಲ್ಲ ಸೊಗಡನ್ನೂ, ವಿಕೃತ ಸೌಂದರ್ಯವನ್ನೂ ಅರಗಿಸಿಕೊಂಡೇ ಮೂಡಿ ಬರುತ್ತಾರೆ. ಲೂಯಿಸ್‌ರವರ ಆಧುನಿಕ ಪ್ರಜ್ಞೆ ಅವರ ಕೃತಿಗಳ ವಸ್ತುವಿನದಲ್ಲ; ಅದರ ನಿರ್ವಹಣೆಯದು. ಹೌದು ನಮ್ಮ ಜನ ಆಂತರಿಕವಾಗಿ ಎಂದಿಗೂ ಒಂದೇ ಆಗಿದ್ದರೂ ಕಾಲಕಾಲಕ್ಕೆ ಬಾಹ್ಯವಾಗಿ ಬದಲಾಗುತ್ತಾರೆ; ಸಂದರ್ಭ, ಪರಿಸರಗಳ ಪ್ರಭಾವದಿಂದ ಹೊಸರೀತಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ಅಂತಹ ಜನರ ಆತ್ಮವನ್ನೇ ಬಗೆದು ನಮ್ಮ ಮುಂದೆ ಇಡುವಂತೆ ಲೂಯಿಸ್, ಬಿ.ವಿ.ಕೆ. ಶಾಸ್ತ್ರಿಯವರ ೧೯೮೦ರ ದಶಕದ ಆದರೆ ೨೦೧೭ರ ಸಂದರ್ಭಕ್ಕೂ ಸೂಕ್ತವಾಗಿ ಕಾಣುವಂತಹ, 'ದಟ್ಟರೇಖೆ : ದಿಟ್ಟ ಬಣ್ಣ'ಗಳಿಂದ ಒರಟಾಗಿಯೇ ಚಿತ್ರಿಸುತ್ತಾರೆ; ಘಾವಿಸ್ಟರಂತೆ ಅಲ್ಲ ಎಂಬುದು ನೆನಪಿರಲಿ. ದೈವೀಕತೆಗೆ ಹತ್ತಿರವಾಗುವ ಉದ್ದೇಶದಿಂದರಬಹುದು, ಪೀಟರ್ ಲೂಯಿಸ್‌ರಿಂದ ಜೀಸಸ್ ಕ್ರಿಸ್ತನೂ ಹಲವು ಸಂದರ್ಭಗಳಲ್ಲಿ ಮೇಲೆ ಹೇಳಿದ 'ಬಗೆದು ನೋಡುವ' ರೀತಿಯಲ್ಲಿಯೇ ಚಿತ್ರಿಸಲ್ಪಟ್ಟಿದ್ದಾನೆ.



ಕೆ. ವೆಂಕಟಪ್ಪನವರ 'ಊಟಿಯ ಹುಣ್ಣಿಮೆಯ ಚಂದ್ರ'.
ಮಾಧ್ಯಮ: ಜಲವರ್ಣ, ೧೯೩೬.



ಆರ್. ಎಂ. ಹಡಪದ್‌ರವರ ಒಂದು ಕೃತಿ.

ಗ್ರಾಮೀಣ ಸೊಗಡಿನ ಅಭಿವ್ಯಕ್ತಿಗಳಿಂದ ವಿಶಿಷ್ಟರಾಗಿ ಕಾಣುವ ಎಂ.ಬಿ. ಪಾಟೀಲ್‌ರವರು ನಮ್ಮ ನಡುವೆ ಹಲವು ಚಿತ್ರ-ಸಾಧ್ಯತೆಗಳ ಅನ್ವೇಷಕರು. ಮೈಸೂರು, ಬೆಂಗಳೂರು, ಮದರಾಸಿನ ಚೋಳಮಂಡಲಗಳ ನಡುವಿನ ಸಂಚಾರಿ ಎಸ್.ಜಿ. ವಾಸುದೇವ್ ತಮ್ಮ 'ವೃಕ್ಷ' ಶೀರ್ಷಿಕೆಯ ಕೃತಿಗಳಿಂದ ಹೆಚ್ಚು ಪರಿಚಿತರಾದವರು. ಭಾರತೀಯ ಪರಂಪರೆಯಲ್ಲಿ ತಾತ್ವಿಕವಾಗಿ, ಧಾರ್ಮಿಕವಾಗಿ 'ವೃಕ್ಷ'ಕ್ಕೆ ಇರುವ ಪ್ರಾಮುಖ್ಯತೆಗೆ ಇಡೀ ವಿಶ್ವವೇ ತಲೆದೂಗಿದೆ. ಅದರ ಬೇರಗಳ ಆಳ, ಕೊಂಬೆಗಳ ವಿಸ್ತಾರಗಳೆರಡರ ನಡುವೆ ನಿಂತು ನಮ್ಮ ಬದುಕನ್ನು ಬಗೆದು ನೋಡುವ ವಾಸುದೇವ್ ತಮ್ಮದೇ ಆದ ರೀತಿಯ ರೂಪ ಸಂಯೋಜನಾ ನಿರ್ವಹಣೆಯನ್ನು ರೂಢಿಸಿಕೊಂಡಿದ್ದಾರೆ. ಭಾರತೀಯ ಎಲ್ಲ ಧರ್ಮಗಳಲ್ಲಿಯೂ ವೃಕ್ಷವು ತನ್ನದೇ ಆದ ಪಾತ್ರವನ್ನು ಹೊಂದಿ ಪ್ರಾಮುಖ್ಯತೆಗಳಿಸಿದೆ. ಆದರೂ ವಾಸುದೇವ್ ಪರಂಪರೆಯನ್ನು Deconstruct ಮಾಡುವಂತೆ ವೃಕ್ಷವನ್ನು ತಮಗೆ ಬೇಕಾದಂತೆ ಬಗೆದು ಬಳಸಿಕೊಳ್ಳುತ್ತಾರೆ; ತಲೆ ಕೆಳಗೂ ಮಾಡುತ್ತಾರೆ. ಹುಟ್ಟು-ಸಾವುಗಳ ಸಾಂಕೇತಿಕವಾಗಿಯೂ ವೃಕ್ಷವನ್ನು ಹಲವು ಶೀರ್ಷಿಕೆಗಳ ಕೃತಿಮಾಲೆಗಳಲ್ಲಿ



**ಎಸ್. ಜಿ. ವಾಸುದೇವ್‌ರವರ ಒಂದು ಕೃತಿ.**
**ಮಾಧ್ಯಮ : ತೈಲವರ್ಣ**

ಬಿಂಬಿಸಿದ್ದಾರೆ. ಬೇಂದ್ರೆಯವರು 'ಕಲ್ಪವೃಕ್ಷ ಬೃಂದಾವನ.....' ಎಂದು ಹೇಳುವ ಸಾಲು Between the linesನ reading ನಂತೆ ವಾಸುದೇವ್ ರವರಿಗೆ ಕಂಡು ಹಲವು ಸಾಧ್ಯತೆಗಳಿಗೆ ಒಳಗಾಗಿ ಮತ್ತೆಮತ್ತೆ ಮಥನಗೊಂಡಿದೆ. ಎಲ್ಲಿಯೂ ಧರ್ಮ-ದೈವದ ಸೋಂಕು ಇಲ್ಲ ಎಂದೆನ್ನಿಸಿದರೂ ಬೇರುಗಳ ಪ್ರಭಾವ ಇದೆ. ನೈಜತೆಯಿಂದ ದೂರ ಒಯ್ದು ರೂಪವೊಂದನ್ನು ಒಗೆದು, ವಿಕೃತಿಗೊಳಿಸಿ, ರೂಪಾಂತರ ಮಾಡಿ ಹೊಸ ರೂಪವನ್ನು ನೀಡುವ ಸೃಷ್ಟಿ ಪ್ರಕ್ರಿಯೆ ಅವರದು. ಪ್ರಭಾವಗಳನ್ನು ಮೀರಿ ಅರಗಿಸಿಕೊಂಡ ಪ್ರತಿಕ್ರಿಯಾ ರೂಪಿ ರೂಪಾಂತರಿತ ರೂಪಕಗಳ ಲೋಕ ಅವರದು. ಹಾಗೆ ನೋಡಿದರೆ ವಾಸುದೇವ್‌ರವರು ಧರ್ಮ-ದೈವಗಳ ಒಳ ಆವರಣದಲ್ಲಿಯೇ ಉಳಿದು ಅಭಿವ್ಯಕ್ತಿಸುತ್ತಿರುವವರು. ಮನೆ-ಊರು-ಬೀದಿಗಳು ಬೆಂಗಳೂರು-



ಜೆ.ಎಸ್. ಖಂಡೇರಾವ್‌ರವರ ನೆಹರೂ ಆಶಯಗಳ ಒಂದು ಕೃತಿ.



ಎಂ.ಬಿ. ಪಾಟೀಲರ 'ಹೋರಾಟ' ಕೃತಿ. ಮಾಧ್ಯಮ : ಆಕ್ರಿಲಿಕ್.

ಚೋಳಮಂಡಲ ಮದರಾಸು ಹೀಗೆ ಎಲ್ಲಿಯೇ ಆಗಲಿ, ಅಲ್ಲೆಲ್ಲಾ ಎಲ್ಲವೂ ಇವೆ. ಅವರಿಂದ 'ಗಣಪತಿ' ರೇಖಾಚಿತ್ರ, ಉಬ್ಬುಶಿಲ್ಪಗಳು ಮೂಡಿಬಂದಿಲ್ಲವೆ.! ವೆಂಕಟಪ್ಪ ಆರ್ಟ್ ಗ್ಯಾಲರಿಯ ಕಲಾಸಂದರ್ಭವೊಂದರ ಉದ್ಘಾಟಣೆಯನ್ನು 'ಗಣಪತಿ' ರೇಖಾಚಿತ್ರದಿಂದ ವಾಸುದೇವ್ ಮಾಡಿದಾಗ ನನ್ನೊಂದಿಗೆ ಪಿ. ಲಂಕೇಶ್ ಅಸಮಾಧಾನ ವ್ಯಕ್ತಪಡಿಸಿದ್ದುಂಟು. ಹಾಗಾಗಿ ಅವು ಹೇಗೋ ಹಿತ್ತಿಲಬಾಗಿಲಿನಿಂದ ಪ್ರವೇಶಿಸುವಂತೆ, ಅವು ಅಂದರೆ ಪರಂಪರೆಯ ಚಿತ್ರ, ಶಿಲ್ಪಪ್ರಕಾರ, ಮಾಧ್ಯಮ ಇತ್ಯಾದಿಗಳು ವಾಸುದೇವರಿಂದ ಹೊಸ ರೀತಿಗಳಲ್ಲಿ ಕಾಣಿಸಿಕೊಳ್ಳುವಂತೆ ಅವರನ್ನು ಖಂಡಿತ ಪ್ರಭಾವಿಸುತ್ತವೆ. ಇಲ್ಲಿ ಹೆರಾಲ್ಡ್ ಬ್ಲೂಮ್‌ನ Anxiety of influence ತಾತ್ವಿಕತೆಯನ್ನು ನೆನಪುಮಾಡಿಕೊಳ್ಳಿ. ನಮ್ಮಲ್ಲಿ ಪರಂಪರೆಯಿಂದ ದೇವಾಲಯಗಳಲ್ಲಿ ಉಬ್ಬುಶಿಲ್ಪಗಳಲ್ಲಿ ಲೋಹದ ಮಾಧ್ಯಮಗಳಲ್ಲಿ ಹಲವಾರು ದೇವ ದೇವಿಯರು ಹಲವು ರೀತಿಗಳಲ್ಲಿ ನಮ್ಮ ಕರಕುಶಲಿಗಳಿಂದ ಮೂಡಿಬರುತ್ತಾರಷ್ಟೆ. ವಾಸುದೇವ್ ಇದೇ ಪರಂಪರೆಯನ್ನು ಮಾಧ್ಯಮವನ್ನು ತಂತ್ರಗಳನ್ನು ತಮಗಾಗಿ ಹೊಸ ದೃಶ್ಯ ರೂಪಸೃಷ್ಟಿಗಾಗಿ ಕರಕುಶಲಿಗಳ ನೆರವು ಪಡೆದು ಹೊಸಕೃತಿ ಸೃಷ್ಟಿಗೆ ಕಾರಣರಾಗುತ್ತಾರೆ. ನಮ್ಮ ಪರಂಪರೆಯೇ ಅಲ್ಲದೆ ಸುತ್ತಲಿನ ಎಲ್ಲವೂ ರೂಪಾಂತರಗೊಂಡು, ಪ್ರಭಾವದ ಆತಂಕಮೀರಿ ಕಾಣಿಸಿ ಕೊಳ್ಳುತ್ತವೆ; ಅನನ್ಯವೂ ಆಗುತ್ತವೆ; ವಿಕೃತಿ ಸೌಂದರ್ಯ ಮೀಮಾಂಸೆಗೂ ಉತ್ತಮ ಉದಾಹರಣೆಗಳಾಗುತ್ತವೆ.

ಜೆ.ಎಸ್. ಖಂಡೇರಾವ್ (ಜನನ : ೧೯೪೦)ರವರ ಅಭಿವ್ಯಕ್ತಿಗಳು ನೆಲದ, ಜನರ ಪ್ರೀತಿಯ ಜತೆಜತೆಗೇ ಬಹಳ ಮುಖ್ಯವಾಗಿ ದೈವೀಕ ಅನುಭವಲೋಕವನ್ನು ಗ್ರಹಿಸಿವೆ. ಅವರ ಅಭಿವ್ಯಕ್ತಿಯ ಮುಖ್ಯ ಆಶಯವೂ ಅದೇ ಆಗಿದೆ. ಕಲ್ಯಾಣ ನಾಡಿನ ಅನುಭವ ಮಂಟಪ, 'ಸಮವಸರಣ', 'ಭಾವನಗರದ ಜೈನ ಗುರುದೇವ,' 'ಅಭಿಷೇಕ ವಿರಾಟ್ ದರ್ಶನಂ', ಪಟ್ಟದ ಕಲ್ಲಿನ ದೇವಾಲಯಗಳು ಮತ್ತು ಹಂಪಿಯ ಭೂದೃಶ್ಯಗಳು ಮೊದಲಾದ ಕೃತಿಗಳು ಇಲ್ಲಿ ನೆನಪಾಗುತ್ತವೆ. ಅವರ 'ವಿಂಡೋ' ಶೀರ್ಷಿಕೆಯ ಕೃತಿಸರಣಿಯು ಅಮೂರ್ತ ದೃಶ್ಯಧ್ಯಾನದಂತಿದೆ. ೨೦ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಅವರು ಬಣ್ಣಗಳೊಂದಿಗೆ ಆಡಿದ ಸಂಶೋಧನಾತ್ಮಕ, ಸೌಂದರ್ಯಾತ್ಮಕ ಆಟಗಳ ಕಾರಣವಾಗಿ ಮೂಡಿಬಂದ ಬೆಳಕಿನ, ಹಲವು ವರ್ಣಛಾಯಾಂತರಗಳ, ಪ್ರೌಢ ಪ್ರಬಂಧದ ಸಂಯೋಜನಾ ಆಟದಂತಹ ಕೃತಿಗಳು, ದೈವಕೇಂದ್ರಿತ ಅಥವಾ ಪ್ರೇರಿತ ಕೃತಿಗಳಂತೆ ಕಾಣುತ್ತವೆ. ಜಿ.ಎಸ್. ಶೆಣೈರವರ ಅಲ್ಯೂಮಿನಿಯಂ ಲೋಹದ ಫಲಕಗಳ ಉಬ್ಬುಶಿಲ್ಪಗಳಲ್ಲಿ ಯಕ್ಷಗಾನದ ಹಲವು ರೂಪಗಳೇ ಅಲ್ಲದೆ ಪುರಾಣದ ಹಲವು ದೇವತೆಗಳು ಮೂಡಿಬಂದಿದ್ದಾರೆ. ಕೈಲಾಸ ಪರ್ವತವನ್ನು ಎತ್ತಲು ಪ್ರಯತ್ನಿಸುತ್ತಿರುವ ರಾವಣನ ರೂಪ ಕಲ್ಪನಾ ವಿಲಾಸವು ಸುಂದರವಾಗಿ ಸಂಯೋಜಿಸಲ್ಪಟ್ಟಿದೆ. ಸ್ವಾತಂತ್ರ್ಯದ ಸಂದರ್ಭದ ಎಲ್ಲ ಕಲಾವಿದರಂತೆ ಶೆಣೈರವರ ಭೂ ದೃಶ್ಯಗಳಲ್ಲಿ ನಮ್ಮ ನೆಲದ ಪ್ರೀತಿಯು ಜಲವರ್ಣಗಳಲ್ಲಿ

ಧಾರೆಧಾರೆಯಾಗಿ ಉಕ್ಕಿಹರಿದಿದೆ. ಅವರ ಹಂಪೆಯ ಬಂಡೆಗಳ ದೃಶ್ಯವೈಭವವೊಂದು ಅಪೂರ್ವ ಸಂದರ್ಭವನ್ನೇ ಸೃಷ್ಟಿಸಿದ್ದು ಉಂಟು; ಕವಿಗಳು ಕಾವ್ಯರಚಿಸಲು ಸ್ಫೂರ್ತಿ ನೀಡಿದ್ದು ಉಂಟು. ಬಹುತೇಕ ಗಣಪತಿಯ ರೂಪಗಳು ಸಹ ವೈವಿಧ್ಯಮಯವಾಗಿ ಮೂಡಿಬಂದಿವೆ. ಚಿತ್ರಿಸುವ ಪ್ರಕ್ರಿಯೆಯಲ್ಲಿ ಜಲವರ್ಣಗಳ ಹರಿಯುವ ಗುಣವನ್ನು ಶೆಣೈ ಆನಂದಮಯ ಆಟದಂತೆ ದುಡಿಸಿಕೊಂಡಿದ್ದಾರೆ. ಈ ಆನಂದವು ಕೆಲವೊಮ್ಮೆ ಕೊಳ್ಳುವವರೊಂದಿಗೆ ರಾಜಿಮಾಡಿಕೊಳ್ಳದೆ ದಕ್ಕಿರುವುದೇ ಹೆಚ್ಚು. ಕೊಳ್ಳುವವರು ಹೇಳಿದ್ದಕ್ಕಿಂತಲೂ ಶೆಣೈರವರು ಸೃಷ್ಟಿಸಿದ್ದೇ ಬಹುತೇಕರಿಂದ ಸಂಗ್ರಹಿಸಲ್ಪಟ್ಟಿದೆ. ಆ ಸಂಗ್ರಹವು ಬಹುತೇಕ ದೈವ ಸಂಬಂಧೀ ಆಶಯವನ್ನೇ ಹೊಂದಿದೆ.

ಈ ಮೇಲೆ ಉಲ್ಲೇಖಿಸಿರುವ ಇವರೆಲ್ಲರೊಂದಿಗೆ ಇನ್ನೂ ಹಲವರು ಆಧುನಿಕತೆಯ ಹಸಿವನ್ನು ಪರಂಪರೆಯ ಪ್ರೀತಿಯ ಬೇರುಗಳ ಆಸರೆಯಿಂದ ಹಿಂಗಿಸಿಕೊಂಡವರೇ ಆಗಿದ್ದಾರೆ. ಇಲ್ಲಿ 'ಪ್ರಜ್ಞಾಪೂರಕ' ಅಭಿವ್ಯಕ್ತಿಗಳೂ, ಇತರ ಹಲವು ಕಾರಣಗಳ 'ಒತ್ತಾಯ'ವೂ ಒಟ್ಟಾಗಿ, ಅಂದರೆ ಏಕಕಾಲದಲ್ಲಿ ಪ್ರಭಾವ ಬೀರಿರುವಂತೆ ಕಾಣುತ್ತವೆ. ಸಿ.ಪಿ. ರಾಜಾರಾಮ್, ಪೀಟರ್ ಎ. ಲೂಯಿಸ್‌ರಂಥವರು ತಮ್ಮ ಇಷ್ಟಕ್ಕೆ ಪೂರಕವಾಗಿ ಸೃಷ್ಟಿಸಿದ್ದರೆ ಇತರರು ಬಹುತೇಕ 'ಇತರ ಹಲವು ಕಾರಣಗಳ' ಒತ್ತಾಯದ ಜತೆಜತೆಗೇ ಮನದಾಳದಲ್ಲಿ ಕಾಡುವ ಪ್ರಜ್ಞಾಪ್ರವಾಹ ಕಾರಣಕ್ಕೂ ಒಳಗಾಗಿ ಅಭಿವ್ಯಕ್ತಿಸಿರುವ ಸಾಧ್ಯತೆಗಳು ಹೆಚ್ಚಾಗಿವೆ. ಇಲ್ಲಿ ಆಯಾ ಕಲಾವಿದರ ಸಂದರ್ಭ ಪರಿಸರಗಳೂ ತಮ್ಮದೇ ಆದ ಕೊಡುಗೆ ನೀಡಿವೆ.

ಈ ಮೊದಲೇ ಉಲ್ಲೇಖಿಸಿರುವಂತೆ ನಾವು ಹಿಂದೆ ನೋಡಿದರೆ ೧೯೨೦-೩೦ರ ಸಂದರ್ಭ. ಜೆ.ಜೆ. ಕಲಾಶಾಲೆಯಿಂದ ಕಲಿತುಬಂದ ಹಲವರನ್ನು ಉತ್ತರ ಕರ್ನಾಟಕದ ಮಠಗಳು ಪೋಷಿಸಿದವು. ಉಳಿದ ಹಲವಾರು ಕಲಾವಿದರು ಬಡತನದ ಬೇಗೆಗೆ ಬಲಿಯಾದ ಸಂಕಟವೂ ಉಂಟು. ಅಮೀನ್‌ಸಾಹೇಬ ಕಮಡೋಳಿ ಇಲ್ಲಿ ನೆನಪಾಗುತ್ತಾರೆ. ಇಂತಹ ಇತಿಹಾಸದ ನಮ್ಮವರು ಕಲಾವಿದರಾಗಿ ಉಳಿದುಕೊಂಡೇ ಬೆಳೆದು ಅಭಿವ್ಯಕ್ತಿಸಬೇಕೆಂಬ ಅನಿವಾರ್ಯತೆಯನ್ನು ಅರಿತಿದ್ದರು. ಹೆಬ್ಬಾರ್, ಹಡಪದ್, ಎಂ.ಬಿ. ಪಾಟೀಲ್, ಖಂಡೇರಾವ್, ಜಿ.ಎಸ್. ಶೆಣೈರಂಥವರು ಈ ಸತ್ಯದೊಂದಿಗೆ ಮುಖಾಮುಖಿಯಾಗಿದ್ದವರೇ ಆಗಿದ್ದಾರೆ. ಹಾಗಾಗಿಯೇ ಜಿ.ಎಸ್. ಶೆಣೈರವರನ್ನು ಕನ್ನಡದ ದೃಶ್ಯಕಲಾ ಲೇಖಕರೊಬ್ಬರು Factory ಹೋಲಿಸಿ ವಿಮರ್ಶಿಸಿದ್ದು. ಇಂತಹ ಸಂಕೀರ್ಣ ಕೆಲವೊಮ್ಮೆ ವಿಕ್ಷಿಪ್ತ ಸನ್ನಿವೇಶಗಳ ನಡುವೆಯೇ ನಮ್ಮ ಸಮಕಾಲೀನ ತುಮುಲಗಳ ಅಭಿವ್ಯಕ್ತಿಗೆ ಕಾರಣರಾದ ಕಲಾವಿದ ಕಲಾವಿದೆಯರು ಹೆಚ್ಚು ಹೆಚ್ಚು ಕಾಣಿಸಿಕೊಂಡ ಸಂದರ್ಭವೂ ಬಂದೇ ಬಿಟ್ಟಿತು.

# 5. ಸಮಕಾಲೀನ ದೃಶ್ಯಧ್ಯಾನ

## (ಕ್ರಿ.ಶ. 20ನೆಯ ಶತಮಾನದ ದ್ವಿತೀಯಾರ್ಧ ಮತ್ತು 21ನೆಯ ಶತಮಾನದ ಪ್ರಥಮಾರ್ಧ)

ನಮ್ಮ ದೃಶ್ಯಕಲೆಯ ಸೃಷ್ಟಿಯು ಕಾಲ ಮತ್ತು ಕಲಾವ್ಯಾಕರಣ ಮೀರಿಯೂ ನಿನ್ನೆ, ಇಂದು, ನಾಳೆಗಳ ಪ್ರಜ್ಞಾಪ್ರವಾಹದ ಬಯಲು ಆಲಯವಾಗಿ ನೋಡುಗರನ್ನು ಕಾಡುವಂತೆ ಕ್ರಿ.ಶ. ೨೦ನೆಯ ಶತಮಾನದ ದ್ವಿತೀಯಾರ್ಧ ಮತ್ತು ೨೧ನೆಯ ಶತಮಾನದ ಪ್ರಥಮಾರ್ಧದ ಕನ್ನಡದ ಹಲವಾರು ದೃಶ್ಯಕಲಾವಿದ, ಕಲಾವಿದೆಯರಿಂದ ಮೂಡಿಬಂದಿದೆ. ಈ ಎರಡೂ ಸಂದರ್ಭಗಳಿಗೆ ಸೇತುವೆಯಂತೆ ಅಭಿವ್ಯಕ್ತಿಸುವವರ ನಡುವೆಯೇ ಎರಡೂ ಸಂದರ್ಭ ಮೀರಿ, ಕೆಲವೊಮ್ಮೆ ಪ್ರಜ್ಞಾಪೂರ್ವಕವಾಗಿ 'ಇಂದು' ಮತ್ತು 'ನಾಳೆ'ಗಳ ವಿಸ್ಮೃತಿಯಿಂದಲೇ 'ನಿನ್ನೆ'ಗಳ ಅಂದರೆ ಭೂತಕಾಲೀನ ಸಂವೇದನಾಶೀಲತೆಯನ್ನು ಬಿಂಬಿಸುವವರೂ ಇದ್ದಾರೆ. ಹೀಗಾಗಿ ಇಂದಿನ ಸಂದರ್ಭದ ವಿಶಿಷ್ಟ ಸಮಕಾಲೀನ ಜೀವಧ್ವನಿಯೊಂದರ ಸತ್ವವನ್ನು ಅರಗಿಸಿಕೊಂಡು ತೀವ್ರತೆಯಿಂದ ಅಭಿವ್ಯಕ್ತಿಸುವವರ ನಡುವೆಯೂ ಬೇರೆಬೇರೆ ಕಾಲಘಟ್ಟಗಳ, ಪರಸ್ಪರ ವೈರುಧ್ಯಮಯ ಸಂವೇದನಾಶೀಲತೆಗಳ, ವಿಭಿನ್ನ ಪ್ರಕಾರ, ಮಾಧ್ಯಮ, ವಸ್ತು, ಶೈಲಿ ಹಾಗೂ ಆಶಯಗಳ ಅಭಿವ್ಯಕ್ತಿಗಳಿಗೆ ಕಾರಣವಾಗುತ್ತಿರುವ ಕಲಾವಿದ, ಕಲಾವಿದೆಯರೂ ಇದ್ದಾರೆ. ಅಂದರೆ ಏಕಕಾಲದಲ್ಲಿ ಆದಿಮ, ಜಾನಪದ, ಸಂಪ್ರದಾಯ, ಸಮಕಾಲೀನ ದೃಶ್ಯಕಲಾವಿದರು ವೈವಿಧ್ಯಮಯವಾಗಿ ಸೃಷ್ಟಿಸುತ್ತಿರುವ ವಿಶಿಷ್ಟ ಸಂದರ್ಭ ಇದು. 'ನನ್ನ ಸೃಷ್ಟಿಗೆ ಮೇಲಿನವನು ಕಾರಣ' ಎನ್ನುವವರ ಜತೆಜತೆಗೇ 'ನಾನು ಏನನ್ನು ಸೃಷ್ಟಿಸುತ್ತೇನೆಯೋ ಅದೇ ಕಲೆ' ಎನ್ನುವ 'ಸ್ವಯಂ' ಅಭಿಮುಖಿ ಕಲಾವಿದರೂ ಇದ್ದಾರೆ. ಕೆಲವೊಮ್ಮೆ ಎರಡೂ ದೃಷ್ಟಿಗಳ ಕಲಾವಿದರು collaboration ಅಡಿಯಲ್ಲಿ ವಿಶಿಷ್ಟ ಸೃಷ್ಟಿ ಪ್ರಕ್ರಿಯೆಗೆ ಕಾರಣವಾಗಿ ಕರಕುಶಲತೆ ಮತ್ತು ಸಂವೇದನಾ ಶೀಲತೆಗಳ ಪರಸ್ಪರವನ್ನು ಸಾಧಿಸಬಹುದು. ಇಲ್ಲಿ 'ಅವನು' ಮತ್ತು 'ನಾನು' ಇಬ್ಬರೂ ಸಂಧಿಸಬಹುದು. ಅಂದರೆ ಸಂಪ್ರದಾಯ ಕರಕುಶಲಿಗಳು ಮತ್ತು ಸಮಕಾಲೀನ ಕಲಾಶಾಲೆಗಳಲ್ಲಿ ಕಲಿತವರು ಇಡಿಯಾಗಿ ಅಭಿವ್ಯಕ್ತಿಸಬಹುದು.

ಹಿಂದೊಮ್ಮೆ ಮಾಂತ್ರಿಕದಂಡವೇ (Magical tool) ಆಗಿದ್ದ ಕಲಾಸೃಷ್ಟಿಯ ಉದ್ದೇಶವು ೨೧ನೆಯ ಶತಮಾನದ ಪ್ರಥಮಾರ್ಧದ ನಮ್ಮ ಸಮಕಾಲೀನ ಸಂದರ್ಭದಲ್ಲಿ ಹಲವು ಉದ್ದೇಶಗಳಿಗೆ ಪಲ್ಲಟಗೊಂಡಿದೆ.

ಕಲೆಯ ಮಾಂತ್ರಿಕ ದಂಡವು ಹಲವು ಉದ್ದೇಶಗಳನ್ನು ಸಾಧಿಸುತ್ತಿತ್ತು ಎಂಬ ನಂಬಿಕೆಗೆ ಸ್ಪಷ್ಟ ಪುರಾವೆಗಳು ಇಲ್ಲವಾದರೂ 'ಭಾವನೆ' ಮತ್ತು 'ಬುದ್ಧಿವಂತಿಕೆ'ಗಳನ್ನು ಅರಗಿಸಿಕೊಂಡ ನಮ್ಮ ಸಮಕಾಲೀನ ಕಲಾವಿದ/ಕಲಾವಿದೆಯರು ತಮ್ಮ ಅಭಿವ್ಯಕ್ತಿಗಳನ್ನು ಹಲವು ಉದ್ದೇಶಗಳಿಗೆ ದುಡಿಸಿಕೊಳ್ಳುತ್ತಿರುವುದು ಸುಸ್ಪಷ್ಟ. ಮೇಲ್ನೋಟಕ್ಕೆ 'ಹಣ'ದ ಉದ್ದೇಶವೇ ದೊಡ್ಡದಾಗಿ ಕಂಡರೂ ದೈವೀಕ, ಸಾಮಾಜಿಕ, ಧಾರ್ಮಿಕ, ವೈಯಕ್ತಿಕ ಹಿತ ಅಂದರೆ ಸಹಿಯ ಗುರುತಿನ ರಾಜಕಾರಣಗಳ ಉದ್ದೇಶಗಳು ಪ್ರಭಾವಿಸುತ್ತಿವೆ. ಅಲ್ಲದೆ ಕಲಾವ್ಯಾಕರಣ, ಪರಂಪರೆಯ ಸಾಂಪ್ರದಾಯಿಕ ಮಾಧ್ಯಮಗಳನ್ನು ಮೀರಿ ಆಯಾ ಸಂದರ್ಭಕ್ಕೆ, ಮನಸ್ಸಿಗೆ ಸೂಕ್ತವೆನ್ನಿಸಿದ ಕೈಗೆ ಸಿಕ್ಕಿದ ನಿರುಪಯುಕ್ತ ಕಸದಿಂದಲೂ ಕಲಾಕೃತಿಗಳನ್ನು ರೂಪಿಸುವ ರಾಜಕಾರಣವೂ ಹಲವರಿಂದ ನಡೆದಿದೆ. ಈ ಮೊದಲೇ ಉಲ್ಲೇಖಿಸಿರುವಂತೆ "ನಾನು ಏನನ್ನು ಸೃಷ್ಟಿಸುತ್ತೇನೆಯೋ ಅದೇ ಕಲೆ" ಎಂಬ ಧೋರಣೆಯಂತೆ "ನಾನು ಯಾವ material ಅನ್ನು ಬಳಸಿ ಸೃಷ್ಟಿಸುತ್ತೇನೆಯೋ ಅದೇ ಕಲೆ" ಎಂಬ ಧೋರಣೆಯೂ ಕಾಣಿಸಿಕೊಂಡಿದೆ. ಈ ಎಲ್ಲದರ ನಡುವೆ ಹಲವು ಕಲಾವಿದ, ಕಲಾವಿದೆಯರು ಪರಂಪರೆ ಹಾಗೂ ಸಮಕಾಲೀನ ಮಾಧ್ಯಮಗಳಲ್ಲಿ ತೀವ್ರತೆಯಿಂದ ಸೃಷ್ಟಿಸುತ್ತಿದ್ದಾರೆ. ದೃಶ್ಯಕಲೆಗೆ ಘನತೆಯನ್ನು ತಂದಿತ್ತಿದ್ದಾರೆ.



ವಿ. ಜಿ.
ಅಂದಾನಿರವರ
ಒಂದು ರೇಖಾಚಿತ್ರ

ಕೆ.ಟಿ. ಶಿವಪ್ರಸಾದ್‌ರವರ Cristo's self-portrait with fish on TIME magazine cover,
ಮಾಧ್ಯಮ: ತೈಲ ಮತ್ತು ಆಕ್ರಿಲಿಕ್ ವರ್ಣಗಳು, ೫'೬" x ೪'೦", ೨೦೦೬.



ಯೂಸುಫ್
ಅರಕ್ಕಲ್‌ರವರ
ಒಂದು ಕೃತಿ



ಅರ್ಚನಾ ಹಂಡೆಯವರ ಒಂದು ಇನ್‌ಸ್ಟಾಲೇಷನ್. **'The Vell-shop', 'Other side of the grass is always green.**

ವೆಂಕಟಾಚಲಪತಿಯವರ
**Moving form,** ಮಾಧ್ಯಮ : ಕಂಚು. ೧೩"x೧೨" ೧೩". ಸಂಗ್ರಹ: ಆಧುನಿಕ ಕಲಾ ಗ್ಯಾಲರಿ, ನವದೆಹಲಿ.





ಸಿ. ಚಂದ್ರಶೇಖರ್‌ರವರ
**Falling lines.**
ಮಾಧ್ಯಮ: ಆಕ್ರಿಲಿಕ್ ಬಣ್ಣಗಳು.
ಸಂಗ್ರಹ:
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.



ಶೀಲಾಗೌಡರವರ ಒಂದು ಸ್ಥಳ ನಿರ್ಧಾರಿತ ಇನ್‌ಸ್ಟಾಲೇಷನ್. ಕೇರಳದ ಕೊಚ್ಚಿನ್ ಬೈನಾಲೆ.



ಎನ್. ಪುಷ್ಪಮಾಲಾರವರ, 'ಬಂಗಾರದ
ಕನಸುಗಳು' ಒಂದು ಸ್ವಭಾವ (!)
ಛಾಯಾಚಿತ್ರ.

"Ambition and Dream", ಎನ್.ಎಸ್. ಹರ್ಷರವರ ಒಂದು ಸ್ಥಳ ನಿರ್ದಿಷ್ಟ, ಕಾಲ ನಿರ್ದಿಷ್ಟ ಅಭಿವ್ಯಕ್ತಿಯ ಒಂದು ದೃಶ್ಯಲೋಕ. ಟಿ.ವಿ.ಎಸ್. ಶಾಲೆ, ತುಮಕೂರು, ೨೦೦೫.



ಎಮ್.ಎಸ್. ಮೂರ್ತಿರವರ 'ಬುದ್ಧನೆಂಬ ಬೆಳಕು', ಮಾಧ್ಯಮ: ಜಲವರ್ಣ, ೨೦೦೩.



ನಮ್ಮ ಸಮಕಾಲೀನ ಸಂವೇದನಾಶೀಲರು 'ವಿಕೃತಿಯನ್ನು ಸುಂದರವಾಗಿಸುವ' ತಾತ್ವಿಕ ಮತ್ತು ರೂಪಾತ್ಮಕ ಸಾಮರ್ಥ್ಯವನ್ನು ಅರಗಿಸಿಕೊಂಡಿದ್ದಾರೆ. ಹೀಗಾಗಿ ಅವರ ಅಭಿವ್ಯಕ್ತಿಗಳು ಸಹಜ ವೈರುಧ್ಯಮಯ, ಸಂಕೀರ್ಣ ಸಮಕಾಲೀನ ದೃಶ್ಯಲೋಕದ ಬಿಂಬಗಳಂತಿವೆ. ನಮ್ಮ ಸಮಕಾಲೀನ ಹಲವು ಕಲಾವಿದರು ವಿಖ್ಯಾತ ಕಲಾವಿದರ ತಾತ್ವಿಕತೆ/ಆಶಯ/ರೂಪಗಳನ್ನು appropriate ಮಾಡಿಕೊಂಡು ಅಭಿವ್ಯಕ್ತಿಸಿದ್ದು ೨೧ನೆಯ ಶತಮಾನದ ಮೊದಲ ದಶಕಗಳ ಒಂದು ವಿಶೇಷ. ಕೆ.ಟಿ. ಶಿವಪ್ರಸಾದ್, ಯೂಸೂಫ್ ಅರಕ್ಕಲ್ ಇಲ್ಲಿ ದಟ್ಟವಾಗಿ ನೆನಪಾಗುತ್ತಾರೆ. ಕಣ್ಣಿಗೆ ರಾಚುವ ಹಳದಿ ಕೆಂಪುಗಳ ವರ್ಣರಂಜಿತ (ರಾಜಾರವಿವರ್ಮನ ೧೯ನೆಯ ಶತಮಾನದ ಓಲಿಯೋಗ್ರಾಫ್ ಪ್ರಿಂಟ್‌ಗಳಲ್ಲಿ ಎದ್ದು ಕಾಣುತ್ತಿದ್ದ ಹಳದಿ ಮತ್ತು ಕೆಂಪು ಬಣ್ಣಗಳನ್ನು ನೆನಪಿಸುವಂತೆ) ಕೆ.ಟಿ. ಶಿವಪ್ರಸಾದ್‌ರವರ ಸಂಗತ, ಅಸಂಗತ ಕೆಲವು ವಿಖ್ಯಾತ ರೂಪಗಳನ್ನು appropriate ಮಾಡಿಕೊಂಡ ಕೃತಿಗಳು ಗಣನೀಯವಾಗಿವೆ. ಕನ್ನಡದ ಸ್ಥಳೀಯ, ಜಾನಪದೀಯ ಪರಂಪರೆಯ ದಟ್ಟ ಆವರಣವೇ ಅಲ್ಲದೆ ಆತ್ಮವನ್ನೂ ವಿಶ್ವಾತ್ಮಕ ಸಮಕಾಲೀನ ರೂಪ ಮತ್ತು ಆವರಣದೊಂದಿಗೆ ಬಗೆದು ನೋಡುವಂತೆ ಮುಖಾಮುಖಿಯಾಗಿವೆ. ಇಲ್ಲಿ ಅವರ 'cristo's self portrait with fish on TIME magazine cover', 2006, 'By the sea-II', 2006 ತೈಲವರ್ಣದ ಕೃತಿಗಳು ನೆನಪಾಗುತ್ತವೆ. ಇಲ್ಲಿ ಪರಂಪರೆ ಮತ್ತು ಸಮಕಾಲೀನತೆಗಳ ವೈರುಧ್ಯಮಯ ರೂಪಗಳನ್ನು ಸಮ ಸಂಯೋಗಿಯಾಗಿಸಿದ (equivalent) ಮಗುವಿನ ಮುಗ್ಧತೆಯ ಗಾಂಭೀರ್ಯ ಮತ್ತು ಬುದ್ಧಿವಂತಿಕೆಯ, ಭಾವನಾತ್ಮಕತೆಯ ಅವರ ದೃಶ್ಯಲೋಕವು ಅಪೂರ್ವವಾಗಿಯೇ ಸೃಷ್ಟಿಯಾಗುತ್ತದೆ; ಅದೊಂದು ಮಾಂತ್ರಿಕ ಸೃಷ್ಟಿ.[೧]

ವಿಕೃತಿ ಸೌಂದರ್ಯ ಮತ್ತು ಸಮಕಾಲೀನತೆಗಳನ್ನು ಸಂಲಗ್ನಗೊಳಿಸಿದ ವಿ.ಜಿ. ಅಂದಾನಿಯವರ ಕೃತಿಗಳು ಕೆಲವೊಮ್ಮೆ ನಿಗೂಢತೆಯ ಆವರಣವನ್ನೂ ಆವರಿಸಿಕೊಂಡಿರುತ್ತವೆ. ಅಚ್ಚರಿಯಂತೆ ಜೀವನ ಸೌಂದರ್ಯದ ಜೀವ ಧ್ವನಿಯ ಪಿಸುಮಾತಿನ ಅನುಭವವನ್ನೂ ನೀಡುತ್ತವೆ. ಹೀಗಾಗಿ ಅವರಿಂದ 'ಅಕ್ಕಮಹಾದೇವಿ'[೨] ಅನನ್ಯ ಕೃತಿಯು ಮೂಡಿಬಂದಿರುವುದು ಅಚ್ಚರಿಯೇನಲ್ಲ; ಅದು ಅವರ ಆಂತರ್ಯದ ಒಳಧ್ವನಿಯಂತೆಯೇ ಇದೆ.

ಎಲ್ಲರಿಗೂ ಪರಿಚಿತ ರೂಪಗಳ ಮೂಲಕವೇ ಅಪರಿಚಿತ, ಅಸ್ಪಷ್ಟ ಅನುಭವಗಳನ್ನು ನೋಡುಗರಿಗೆ ತಂದುಕೊಡುವಂತೆ ಅಭಿವ್ಯಕ್ತಿಸುವ ಸಿ. ಚಂದ್ರಶೇಖರ್ ಬಹುತೇಕ 'ಭಾವ'ಕ್ಕಿಂತಲೂ 'ಬುದ್ಧಿ' ಬಲವನ್ನು ಅರಗಿಸಿಕೊಂಡವರು; ಸೌಂದರ್ಯಪ್ರಜ್ಞೆಗಿಂತಲೂ ಚಿಂತನಪ್ರಜ್ಞೆಗೆ ಹತ್ತಿರವಾದವರು. ಹಾಗಾಗಿಯೇ ದಲಿತ

ತಾತ್ವಿಕ, ಬಂಡುಕೋರ ಪ್ರವೃತ್ತಿಯ ಚಂದ್ರಶೇಖರ್ ವೈವಿಧ್ಯಮಯ ಮಾಧ್ಯಮಗಳ ಹುಡುಕಾಟ ನಡೆಸಿದ್ದಾರೆ. ರೇಖಾಚಿತ್ರ ಮಾಧ್ಯಮದಲ್ಲಿ ವಿಕೃತಿ ಸೌಂದರ್ಯ ಮೀಮಾಂಸೆಯ ಮೂಲದ ಅವರ ಅಭಿವ್ಯಕ್ತಿಯು ತೀವ್ರತೆಯಿಂದ ಕಾಣಿಸಿ ಕೊಂಡಿರುವುದು ಗಮನಾರ್ಹ; ವಿಡಂಬನೆಯು ಸಶಕ್ತ. ತಾಂತ್ರಿಕ ಪಾರಮ್ಯದ ಅವರ ಗ್ರಾಫಿಕ್ ಮಾಧ್ಯಮದ ಎಚ್ಚಿಂಗ್ ಮತ್ತು ಸೆರಿಗ್ರಾಫ್ ತಂತ್ರಗಳ 'Stich' ಪ್ರಿಂಟುಗಳೂ ಇಲ್ಲಿ ನೆನಪಾಗುತ್ತವೆ. ಅವರ ಉಳಿದ ಅಭಿವ್ಯಕ್ತಿಗಳಲ್ಲಿ ನಮ್ಮ ಬದುಕಿನ ಅಸಂಗತ ದೃಶ್ಯಲೋಕವು ಸಾಂಕೇತಿಕವಾಗಿ ಮೂಡಿಬಂದಿದೆ. 'Fear' ತೈಲ ವರ್ಣಕೃತಿಯಲ್ಲಿ ನೋಡುಗನನ್ನು ಕಾಡುವ ಭಾವವಿದೆ. ಅಭಿವ್ಯಕ್ತಿಗೆ ತಮ್ಮದೇ ಆದ ಹೊಸಹೊಸ ಮಾಧ್ಯಮಗಳನ್ನು ಅನ್ವೇಷಿಸಿಕೊಳ್ಳುವ ರವಿಕಾಶಿ ಹಲವು ಆಶಯಗಳ ಕೇಂದ್ರಿತ ದೃಶ್ಯಲೋಕಗಳ ಸೃಷ್ಟಿಕಾರರು. ನಮ್ಮ ಸುತ್ತಲಿನ ಹಲವು ದೃಶ್ಯ/ನೋಟಗಳಿಗೆ ಪ್ರತಿಕ್ರಿಯಾ ರೂಪದಂತಹ ಹೊಸ ಸಂದರ್ಭ ಸೃಷ್ಟಿಯಂತಹ 2016-17ರ ಅವರ ಅಭಿವ್ಯಕ್ತಿಗಳು ತಮ್ಮ ತೀವ್ರತೆಯಿಂದ ನೋಡುಗನ ಅಗತ್ಯವನ್ನೂ ಬಯಸುವಂತೆಯೇ ಅಸಾಮಾನ್ಯ ನೋಡುವಿಕೆಯನ್ನೂ ನಿರೀಕ್ಷಿಸುತ್ತವೆ. ಐತಿಹಾಸಿಕ ಪ್ರಜ್ಞೆಯು ರವಿಕಾಶಿಯವರ ಅಭಿವ್ಯಕ್ತಿಯ ಒಂದು ಬಲಾನ್ವಿತ ಅಂಶವಾಗಿರುವುದು ಗಮನಾರ್ಹ.

ಹೊಳೆಯುವುದನ್ನು ನಿರಾಕರಿಸಿ ಪ್ರಶಾಂತ ಭವ್ಯ ಬೆಳದಿಂಗಳಿನಲ್ಲಿ ಉಳಿದ ಬುದ್ಧನು 'ಕೇವಲ ಬುದ್ಧನಲ್ಲ, ಒಂದು ಧರ್ಮದ ಗುರುವಲ್ಲ, ಈತ ನಮ್ಮ ನಿಮ್ಮೊಳಗಿನ ನಿರ್ಮಲ ಮನಸ್ಸಿನ ನಿಷ್ಕಪಟ ನಗುವಿನ ತಾಯಿಯ ಅಂತಃಕರಣದ ಪ್ರಶಾಂತ ಬೆಳಕು' ಎಂದು ತಮ್ಮ 'ಬುದ್ಧನೆಂಬ ಬೆಳಕು' ಕಲಾಕೃತಿಯ ಕುರಿತು ಹೇಳುವ ಎಂ.ಎಸ್. ಮೂರ್ತಿ ಈ ಆಶಯದ ದೃಶ್ಯ ಸಂದರ್ಭವನ್ನು 'ಮೂರ್ತದಿಂದ ಅಮೂರ್ತದೆಡೆಗೆ ಸಾಗಿದ, ಶಬ್ದದಿಂದ ನಿಃಶಬ್ಧವನ್ನು ಧಿಕ್ಕರಿಸಿ......'ದ ರೀತಿಗೆ, ಮೂರ್ತ ಅಮೂರ್ತಗಳ ಕಸಿಮಾಡಿದ ದೃಶ್ಯ ರೂಪವನ್ನಾಗಿ ಸೃಷ್ಟಿಸಿದ್ದಾರೆ. ದೈವೀಕ ದೃಶ್ಯಧ್ಯಾನ ನೀಡುವ ಬಿಡುಗಡೆಯ ಭಾಗ್ಯದ ಮೂರ್ತಿಯವರ ಈ ದೈವೀಕ ದೃಶ್ಯಲೋಕವು ಅವಕಾಶದಲ್ಲಿ (Space) ಕತ್ತಲೆ ಬೆಳಕುಗಳ, ತೆರೆ-ಮರೆಗಳ ನಡುವೆ ನಡೆದ ಭುವನದ ಭಾಗ್ಯದಂತಿದೆ; ಹೇವಜ್ರ ತಂತ್ರದ "ಮೊದಲು ಶೂನ್ಯದ ಸಾಕ್ಷಾತ್ಕಾರ, ನಂತರ ಎಲ್ಲವೂ ಕೇಂದ್ರೀಕೃತವಾದ ಬೀಜದ ಸಂಗ್ರಹ, ಭೌತಿಕ ಅಭಿವ್ಯಕ್ತಿ......" ಎಂಬಂತಿದೆ.[೩] ಬಿಳಿಯ ಬಣ್ಣವು ಬುದ್ಧನ ರೂಪಕದಂತೆಯೇ ಬಿಂಬಿಸಲ್ಪಟ್ಟಿದೆ. ಅದು ಅಜ್ಞಾನದ ಭ್ರಮೆ/ಮಾಯೆಯನ್ನು ವಿವೇಕದ ವಾಸ್ತವಿಕತೆಗೆ ರೂಪಾಂತರಿಸುವ ಸಾಂಕೇತಿಕ ಭಾವದ ಹೊಳಹನ್ನೂ ಹೊಂದಿದೆ. ಬೌದ್ಧ ಆಧ್ಯಾತ್ಮಿಕ, ಚಿಂತನೆಯೇ 'ಬಂಗಾರ ಸದೃಶ' ಎಂದೇ ಹೇಳಲಾಗಿದ್ದು ಸೂರ್ಯ ಅಥವಾ ಅಗ್ನಿಯನ್ನು ಅದು ಸಂಕೇತಿಸುತ್ತದೆ. ಬಹುಷಃ ಹೀಗಾಗಿಯೇ ಬಂಗಾರದ ತೆಳುಹಾಳೆಯನ್ನು ಮೂರ್ತಿಯವರು ಸಾಂಕೇತಿಕವಾಗಿ ದುಡಿಸಿಕೊಂಡಿರುವಂತಿದೆ; ಕತ್ತಲೆಯನ್ನೇ



ಡಿ|| ರವೀಶ್ ಕಾಸರವಳ್ಳಿಯವರ
ಒಂದು ಡಿಜಿಟಲ್ ಪ್ರಿಂಟ್.

ಮೈಸೂರಿನ ರಘೋತ್ತಮ ಪುಟ್ಟಿಯವರ
ಒಂದು ರೇಖಾಚಿತ್ರ.



ಕೆ.ಕೆ. ಹೆಬ್ಬಾರರ 'ತುಳಸೀದಾಸ', ರೇಖಾಚಿತ್ರ ಮಾಲೆಯ
ಒಂದು ಕೃತಿ, ೧೯೮೯.






ಜಿ.ಎಸ್. ಶೆಣೈರವರ ಒಂದು ಭೂ ದೃಶ್ಯ.
ಮಾಧ್ಯಮ: ಜಲವರ್ಣ.

ಬೆಳಕಾಗಿ, ನೆರಳುಗಳ ಛಾಯಾಂತರಗಳನ್ನೇ ಬಣ್ಣಗಳಾಗಿ, ಬಣ್ಣಗಳನ್ನೇ ಶಬ್ದದೊಳಗಿನ ಮೌನದಂತೆ ಬಿಂಬಿಸಿದಂತಿದೆ. ನಾಗಾರ್ಜುನನ ಬೌದ್ಧಮಾಧ್ಯಮಿಕ ಚಿಂತನೆ ಮತ್ತು ಡೆರಿಡಾನ ನಿರಚನೆ[೬] (de construction) ದೃಷ್ಟಿಗಳ ಹಿನ್ನೆಲೆಯಲ್ಲಿಯೂ ಈ 'ಬುದ್ಧನೆಂಬ ಬೆಳಕು' ದೃಶ್ಯ ಗ್ರಹಿಕೆಗೆ ವಿಶಿಷ್ಟ ಆಯಾಮಗಳೂ ಇರುವಂತಿವೆ. ೨೦೧೬ರಲ್ಲಿ ಮೂರ್ತಿಯವರಿಂದ ಮೂಡಿಬಂದ 'Content and container' ಸೃಷ್ಟಿಪ್ರಕ್ರಿಯೆಯಲ್ಲಿ 'I am waiting for the positive seeds of content' ಎಂಬಂತಹ ಪರಮ, ಆಶಾವಾದದ ಅನ್ವೇಷೀ ಕ್ರಿಯೆಯು ನೋಡುಗರ ಪ್ರತಿಕ್ರಿಯೆಯನ್ನು ಪ್ರಭಾವಿಸಬಲ್ಲದು. ನಮ್ಮ ಪ್ರಜ್ಞೆಯ ಪ್ರವಾಹದ ಹರಿವು ನಿರಂತರ. ಹಾಗಾಗಿಯೇ ನಮ್ಮ ಹಲವು ಸಂದರ್ಭಗಳ ಸಾಮಾಜಿಕ, ಸಾಂಸ್ಕೃತಿಕ ಆಗುಹೋಗುಗಳು ನಿರಂತರವಾಗಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬರುತ್ತವೆ; ತಮ್ಮದೇ ಆದ ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಹೀಗಾಗಿಯೇ ದೈವೀಕತೆಯೂ ಇನ್ನಿತರ ಸಂವೇದನೆಗಳಂತೆ ಪ್ರಕಟಗೊಳ್ಳುತ್ತಲೇ ಬಂದಿದೆ. ದೈವೀಕ ದೃಶ್ಯಧ್ಯಾನವೆಂದರೆ ಇದೇ ಇರಬೇಕು. ಡಿಜಿಟಲ್ ಇಡಿ ಚಿತ್ರ ಇತ್ಯಾದಿಗಳ ಬಹು ಮಾಧ್ಯಮ ನಡುವೆಯೂ ಇನ್‌ಸ್ಟಾಲೇಷನ್ ಕಲಾ ಪ್ರಕಾರದ ಹುಚ್ಚಿನ ನಡುವೆಯೇ ದೈವ ಸಂಬಂಧಿತ ಚಿತ್ರ, ಶಿಲ್ಪ ಇತ್ಯಾದಿ ಕೃತಿಗಳು ಹಲವರಿಂದ ಮೂಡಿ ಬರುತ್ತಲೇ ಇವೆ.

ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪರಂಪರೆಯ ಪ್ರಜ್ಞಾಪ್ರವಾಹದ ನಡುವೆ ಮೈಸೂರು ಸಂಪ್ರದಾಯ ಚಿತ್ರಕಲೆಯ ಒಳ-ಹೊರಗನ್ನು ಅರಗಿಸಿಕೊಂಡವರು ಎಂ.ಜೆ. ಕಮಲಾಕ್ಷಿ. ೨೦೧೫ರ ಸಂದರ್ಭದ ಅವರ ಅಭಿವ್ಯಕ್ತಿಗಳು ಮೈಸೂರು ಚಿತ್ರ ಪರಂಪರೆಯ ಪತ್ಯ ಮತ್ತು ರೇಖಾಚಿತ್ರಗಳ ಮೂಲದಿಂದ ಮೂಡಿಬಂದಿದ್ದು ವಿಶಿಷ್ಟ ರೀತಿಯ ದೃಶ್ಯಾತ್ಮಕ ಹುಡುಕಾಟವನ್ನು ಬಿಂಬಿಸುತ್ತವೆ. 'City and Forest' ಕೃತಿಯನ್ನು ಇಲ್ಲಿ ಉದಾಹರಿಸಬಹುದು. ಇಲ್ಲಿಯೂ ದೈವೀಕತೆಯ ಹೊಳ ಹುಗಳಿವೆ. ಪರಂಪರೆಯ ನಗರ, ಕೋಟೆ ಇತ್ಯಾದಿ ವಾಸ್ತುಶಿಲ್ಪ ವಿವರ, ಪತ್ಯಗಳ ಮೂಲವನ್ನು appropriate ಮಾಡಿಕೊಂಡಿರುವ ಈ ವಿಶಿಷ್ಟ ಕೃತಿಯಲ್ಲಿ ಸಾಮಾನ್ಯ ಮನೆ, ಅರಮನೆ, ಗುರುಮನೆಗಳ ಜತೆಜತೆಗೇ ದೇವಾಲಯ, ದೇವಮಂಟಪ ಪುಷ್ಕರಣಿ ಇತ್ಯಾದಿಗಳ ಸಾಂಕೇತಿಕ ರೇಖಾ ರೂಪಗಳನ್ನೂ ನೋಡಬಹುದಾಗಿದೆ. 'ಗಣೇಶ', 'ಪುಷ್ಕರಣಿ' ಮತ್ತು 'ರಥ' ಶೀರ್ಷಿಕೆಯ ವಿಶಿಷ್ಟ ಕಲ್ಪನಾ ಸಾಮರ್ಥ್ಯದ ಕೃತಿಗಳಲ್ಲಿ 'ರಥ' ಚಿತ್ರಕೃತಿಯು ತೈಲವರ್ಣದಲ್ಲಿ ಅರೆನೈಜ ಅಂದರೆ abstract expressionist ದೃಷ್ಟಿಯಲ್ಲಿ ಸಂಯೋಜನೆಗೊಂಡಿವೆ. ಇಲ್ಲಿ ರಥ, ಭಕ್ತಜನಮನವು ಅಮೂರ್ತವಾಗಿ ಕಂಡರೂ ಮೂರ್ತವಾಗಿ ಅನುಭವಿಸಲು ಸಾಧ್ಯವಾಗುವಂತೆ ಕಲಾವಿದೆ ದೈವೀಕ ದೃಶ್ಯವನ್ನಾಗಿಸಿದ್ದಾರೆ. ರಥವು ಹರಿಶಿಣ, ಕುಂಕುಮದ ಬಣ್ಣಗಳಲ್ಲಿರುವಂತೆ (ಆದರೆ ಹಳದಿ, ಕೆಂಪು ಅಲ್ಲವೆ?!) ರೂಪಿಸಿದ್ದಾರೆ. ಅಸ್ಪಷ್ಟತೆಯಲ್ಲಿಯೂ ಸ್ಪಷ್ಟ ಕಲ್ಪನೆಯು ನೋಡುಗರಿಗೆ ಮೂಡಿಬರುವಂತೆ ಕಲಾವಿದೆ



ಯಶವಂತ್ ಹಿಬಾರೆಯವರ 'ಅಲ್ಲಮ-ಅಕ್ಕಮಹಾದೇವಿ'. ಮಾಧ್ಯಮ: ತೈಲವರ್ಣ.



ರಘುಪತಿಭಟ್‌ರವರ ಒಂದು ಗಂಜೀಫಾ ಕೃತಿ.



ಪ್ರಭಾಮಲ್ಲೇಶ್‌ರವರ ಮೈಸೂರು
ಶೈಲಿಯ ಒಂದು ಕೃತಿ.



ಮೀರಾಕುಮಾರ್‌ರವರ
'ಗಿರಿಜಾಕಲ್ಯಾಣ' ಕೃತಿ, ೨೦೦೩.



ವಿಜಯಾ ಹಾಗರ ಗುಂಡಗಿಯವರ
ಸುರಪುರ ಶೈಲಿಯ ಒಂದು ಕೃತಿ.



ಎಫ್.ವಿ. ಚಿಕ್ಕಮಠರವರ
'ಕೂರ್ಮಾವತಾರ' ಕೃತಿ.

ಮೈಸೂರು ಅರಮನೆಯ ಹೊರವಲಯದ ಒಂದು
ದೇವಾಲಯದ ಗಾರೆ ಶಿಲ್ಪ. ೧೯ನೆಯ ಶತಮಾನ



ಮಾಡಿದ್ದಾರೆ. ಭವ್ಯತೆ ಮತ್ತು ಸೌಂದರ್ಯಗಳೆರಡೂ ವೈರುಧ್ಯಮಯವಲ್ಲದ ಪರಸ್ಪರತೆಯನ್ನು ಇಲ್ಲಿ ಸಾಧಿಸಿವೆ.

ಸುತ್ತಲಿನ ಎಲ್ಲವನ್ನೂ appropriate ಮಾಡಿಕೊಂಡಂತೆ ಅರಗಿಸಿಕೊಂಡು ಚಿತ್ರಿಸಿದ ಯೂಸೂಫ್ ಅರಕ್ಕಲ್ ವಿಶ್ವದ ಖ್ಯಾತರ ಕಲಾಕೃತಿಗಳ ರೂಪ, ಆತ್ಮಗಳನ್ನೂ appropriate ಮಾಡಿಕೊಂಡು ತಮ್ಮನ್ನೂ ಪ್ರದರ್ಶಿಸಿ ಕೊಂಡವರು. ಸಹಿಮಾಡದಿದ್ದ ಪರಂಪರೆಯ ದೇಶದಲ್ಲಿ ಕಲಾವಿದನಾಗಿ ಸಹಿಯ ಮಹಾತ್ವಾಕಾಂಕ್ಷೆಯನ್ನು ಸಾಧಿಸಿ ತೋರಿದವರು. ಈ ದೃಷ್ಟಿಯಿಂದ ಅವರ My Book of References (೨೦೦೨) ಕೃತಿ ಮಾಲೆಯು ಗಣನೀಯವಾಗಿದೆ. ಹಾಗೆಯೇ ಅವರ 'Light beyond images,' 'The Age of innocence' (2008) ಮತ್ತು 'Spirit and soul' (1998), ಹಾಗೂ Arto-Mobile & Broken Walls' (2012) ಅಭಿವ್ಯಕ್ತಿಗಳು ಗಮನಿಸುವಂತಹವು. ಪರಂಪರೆ ಮತ್ತು ಸಮಕಾಲೀನತೆಗಳ ಬೆಸುಗೆಯಂತಹ ಅಭಿವ್ಯಕ್ತಿಗಳ ವೆಂಕಟಾಚಲಪತಿಯವರ Harmony (2007), Growth (2005) ಮೊದಲಾದ ಶಿಲ್ಪ ಕಲಾಕೃತಿಗಳು ನಮ್ಮ ಸಂದರ್ಭದ ಆಹ್ಲಾದಕರ ವಿಶಿಷ್ಟ ಆಶಯದ ಅಭಿವ್ಯಕ್ತಿಗಳೇ ಆಗಿದ್ದವು. ವಿಕೃತಿ ಸೌಂದರ್ಯಕ್ಕೆ ಉತ್ತಮ ಉದಾಹರಣೆಗಳಂತಹ ಶಿಲ್ಪಗಳ ಶ್ಯಾಮ್‌ಸುಂದರ್ ಸೃಷ್ಟಿಶೀಲತೆಯಿಂದ ಸಶಕ್ತರಾಗಿ ಕಾಣಿಸಿಕೊಂಡವರು.

ಸ್ತ್ರೀಸಂವೇದನಾಶೀಲತೆಗೆ ಬಂಡುಕೋರ ಆಯಾಮ ನೀಡಿದ ಶೀಲಾಗೌಡ ರವರ ಅಭಿವ್ಯಕ್ತಿಗಳಲ್ಲಿ ಸ್ಥಳೀಯ ಸತ್ವಗಳು ವಿಶ್ವಾತ್ಮಕ ಆಶಯಗಳಾಗಿ ಮೂಡಿಬಂದಿವೆ. ಈ ಆಶಯಗಳ ನಿರ್ವಹಣೆಗೆ ಹೊಸ ಮಾಧ್ಯಮಗಳನ್ನೂ ಅವರು ಅನ್ವೇಷಿಸಿ ಕೊಂಡಿದ್ದಾರೆ. ಅವರ 'And tell him of my pain' (1998) ಅಭಿವ್ಯಕ್ತಿಯು ಸೂಜಿದಾರ ಮತ್ತು ಕೆಂಪುವರ್ಣ ದ್ರವ್ಯಗಳನ್ನು ದುಡಿಸಿಕೊಂಡಿದ್ದಿತು. ಆಕಾಶವಾಣಿಯ ಎ.ಎಸ್. ಮೂರ್ತಿಯವರ ಹದಿನೈದು ನಿಮಿಷದ Monologue ನ ಶಬ್ದರೂಪವನ್ನು ದುಡಿಸಿಕೊಂಡ ಅವರ ಇನ್‌ಸ್ಟಾಲೇಷನ್ (Installation) ನ್ಯೂಯಾರ್ಕ್ ಮತ್ತು ಬೆಂಗಳೂರುಗಳಲ್ಲಿ ಪ್ರದಶಿಸಲ್ಪಟ್ಟಿತು. ಸಮಕಾಲೀನ ಸ್ತ್ರೀಸಂವೇದೀ ನೋಟಗಳು post modern 'ವಿಡಂಬನೆಯ' ಮುಖವಾಡದಲ್ಲಿ ಪುಷ್ಪಮಾಲಾ ರವರಿಂದ ಅಭಿವ್ಯಕ್ತಗೊಂಡಿವೆ. ಕೆಲವೊಮ್ಮೆ ತಮ್ಮ ದೇಹವನ್ನೇ ದುಡಿಸಿಕೊಂಡು ಅಭಿವ್ಯಕ್ತಿಸುವ ಅವರು ತಮ್ಮದೇ ಅಸ್ಮಿತೆಯನ್ನು ಸಾಧಿಸಿದ್ದಾರೆ. ನೋಡುವ, ಗ್ರಹಿಸುವ, ಅಭಿವ್ಯಕ್ತಿಸುವ ಹಾಗೂ ಪ್ರದರ್ಶಿಸುವ ರೀತಿಯ ಸಾಧ್ಯತೆಗಳನ್ನು ಮೀರುವ, ಕೆಲವೊಮ್ಮೆ ಧಿಕ್ಕರಿಸುವ, ಅವರು ತಮಗಿಷ್ಟವಾದ ರೀತಿಯಲ್ಲಿ ಎಲ್ಲವನ್ನೂ ನೋಡುತ್ತಿರುವವರು. ಹಾಗಾಗಿ ಅವರು 'ಎಲ್ಲವನ್ನೂ', 'ಎಲ್ಲರನ್ನೂ' ಪ್ರಶ್ನಿಸುವಂತೆ, ತಮ್ಮನ್ನೂ ಪ್ರಶ್ನಿಸಿಕೊಳ್ಳಬಲ್ಲರು; ವಿಡಂಬಿಸಿಕೊಳ್ಳಬಲ್ಲರು. ಹಾಗಾಗಿಯೇ ಅವರ ಪ್ರಭಾವದ ಹಿಂದೆ ಕೆ.ಜಿ. ಸುಬ್ರಮಣಿಯನ್, ಭೂಪೇನ್‌ಕಾಖರ್ ಕಾಣುತ್ತಾರೆ. ಪುಷ್ಪಮಾಲಾರವರು 'Pigs'



ಜಿ.ಎಲ್.ಎನ್. ಸಿಂಹರವರ 'ಶ್ರೀ ಬಾಲಮುಕುಂದ', ೨೦೦೯,
೨೦"*೨೪". ಮಾಧ್ಯಮ: ಜಲವರ್ಣ, ಸಂಗ್ರಹ :
Ramson's Kala prathistana, Mysore.

ಕೆ.ಎಸ್. ಶ್ರೀಹರಿಯವರ ಸಪ್ತ ಮಾತೃಕಾ ಚಿತ್ರ ಸರಣಿಯ 'ಮಾಹೇಶ್ವರಿ' ಕೃತಿ. ಮಾಧ್ಯಮ : ಜಲವರ್ಣ, ೨೦೧೬. ೪೧x೫೧ ಸೆ.ಮಿ. ಸಂಗ್ರಹ : **Romson's Kala Prathistana, Mysore.**





ಕೆ.ಬಿ. ಸುರೇಖರವರ ಒಂದು ಅಭಿವ್ಯಕ್ತಿ.
ಮಾಧ್ಯಮ : ಅನುಪಯುಕ್ತ ಕಂಪ್ಯೂಟರ್ ಕಸ.



ಬಿ.ಕೆ.ಎಸ್. ವರ್ಮರವರ 'ಧನ್ವಂತರಿ' ಕೃತಿ.
ಮಾಧ್ಯಮ : ತೈಲವರ್ಣ.
ಸಂಗ್ರಹ : ಪ್ರಶಾಂತಿ ಆಯುರ್ವೇದಿಕ್ ಸೆಂಟರ್,
ರಾಜಾಜಿನಗರ, ಬೆಂಗಳೂರು.



ಎಂ.ಜೆ.
ಕಮಲಾಕ್ಷಿಯವರ
'ರಥ' ಚಿತ್ರಕೃತಿ,
ಮಾಧ್ಯಮ :
ತೈಲವರ್ಣ,
೧೯೮೦.

'Girl with shell bodg as container' ಮೊದಲಾದ ಅಭಿವ್ಯಕ್ತಿಗಳಲ್ಲಿ ಸಾಂಪ್ರದಾಯಿಕ ಕ್ಲೀಷೆಗಳನ್ನು ಧಿಕ್ಕರಿಸಿದ್ದಾರೆ. ಛಾಯಾಚಿತ್ರ ಮಾಧ್ಯಮದಲ್ಲಿನ ಅವರ ಅಭಿವ್ಯಕ್ತಿಯ 'ಫ್ಯಾಂಟಮ್ ಲೇಡಿ ಅಥವಾ ಕಿಸ್ಮತ್', 'Golden dreams' ಒಂದು ರೀತಿಯ ಸ್ವಭಾವ ಚಿತ್ರ ಮೂಲಕ್ಕೆ ಋಣಿಯಾಗಿವೆ. ಆದರೆ ಹೀಗೆನ್ನಬಹುದೇ? ಎಂದು ನಾವು ಪ್ರಶ್ನಿಸಿಕೊಳ್ಳುವಂತೆ ಅವರೇ ರಾಮಾಯಣದ ಹಲವು ಸಂದರ್ಭಗಳ ಭೂಮಿಕೆಯಲ್ಲಿ ಪಾತ್ರವಹಿಸಿ ವೃತ್ತಿಪರ ತಂತ್ರಜ್ಞರಿಂದ ಛಾಯಾಚಿತ್ರಿಸಿಕೊಂಡು ಪ್ರದರ್ಶಿಸಿದ್ದು ಗಮನಾರ್ಹ. 'ಆವೇಗ', 'ಛಲ', 'ಅಪಹರಣ', 'ಇಂದ್ರಜಾಲ' ಹಾಗೂ 'ಮೃಗಾಯತಿ' ಶೀರ್ಷಿಕೆಯ ಅಭಿವ್ಯಕ್ತಿಗಳವು. ಇಲ್ಲಿ ರವಿವರ್ಮ ಪೌಸಿನ್‌ರ ಚಿತ್ರಕೃತಿಗಳನ್ನು ಆಕರವನ್ನಾಗಿಸಿ ಕಪ್ಪು ಗಾಢಭಾವ ಮತ್ತು ಎಕ್ಸ್‌ಪ್ರೆಷನಿಸ್ಟ್ (ಅರೆನೈಜತೆ) ಬೆಳಕಿನ ಸಂಯೋಜನೆಗಳನ್ನು ಮನಶಾಸ್ತ್ರೀಯ ನಾಟಕೀಯತೆಗಳ ಬಿಂಬಿಸುವಿಕೆಗೆ ದುಡಿಸಿಕೊಂಡಿದ್ದಾರೆ. ಛಾಯಾಚಿತ್ರ ಮಾಧ್ಯಮವೇ ಅಲ್ಲದೆ ವಿಡಿಯೋ ಮಾಧ್ಯಮವೂ ಅವರಿಗೆ ಪೂರಕವಾಗಿ ಕಾಣಿಸಿಕೊಂಡಿದೆ.

ಬಹುತೇಕ ಬಹು ಮಾಧ್ಯಮದಲ್ಲಿ (multi media) ಅಭಿವ್ಯಕ್ತಿಸುವ ಉಮೇಶ್ ನೆಲಕ್ಕೆ ಹತ್ತಿರವಾದ ಅಭಿವ್ಯಕ್ತಿಗೆ ನೆಲವನ್ನೇ ದುಡಿಸಿಕೊಂಡವರು. ದೃಶ್ಯಕಲೆಯ ಸಾಂಪ್ರದಾಯಿಕ ದೃಷ್ಟಿ, ಧೋರಣೆ, ಹಾದಿಗಳನ್ನೇ ಮತ್ತು ಪ್ರಶ್ನಿಸುವ ಪ್ರಕ್ರಿಯೆಯನ್ನೇ ಅಭಿವ್ಯಕ್ತಿಯಾಗಿಸುವವರು. ಅವರ 'Between myths and history' ಹಾಗೂ 'Rights rioits?' ಬಹುಕಾಲ ಕಾಡುವಂತೆ ಬಹುಮಾಧ್ಯಮದಲ್ಲಿ ಮೂಡಿ ಬಂದಿದ್ದವು. ನಮ್ಮ ಸಂದರ್ಭದ ಲಲಿತಾಶಂಕರ್, ಸ್ಮಿತಾಕಾರಿಯಪ್ಪ, ಶಾಂತಾಮಣಿ, ಗಾಯಿತ್ರಿ ದೇಸಾಯಿ, ರೇಣುಕಾ ಮಾರ್ಕಂಡೆ, ಪೂರ್ಣಿಮಾ ಪಾಟೀಲ್, ಸುಪ್ರಿಯಾ ವರ್ಮ, ಅರ್ಚನಾ ಹಂದೆ, ಸುರೇಖರವರುಗಳ ವೈವಿಧ್ಯಮಯ ಹಾಗೂ ಬಹು ಮಾಧ್ಯಮಗಳ ಅಭಿವ್ಯಕ್ತಿಗಳು ನಮ್ಮ ಸಮಕಾಲೀನ ಕಲೆಯ ಜೀವಧ್ವನಿಗಳೇ ಸರಿ. ಲಲಿತಾಶಂಕರ್‌ರವರ ಯೋಗ ಮೂಲದ ಹಲವು ಇನ್‌ಸ್ಟಾಲೇಷನ್‌ಗಳು, ಸ್ಮಿತಾಕಾರಿಯಪ್ಪನವರ 'inhabiting space within space,' 'warp woof weft,' 'The air' ಮೊದಲಾದ installationಗಳು, ಕೆಲವೊಮ್ಮೆ ಅಭಿನೀತ/ Performance ಗಳು, ಶಾಂತಾಮಣಿಯವರ ಸ್ತ್ರೀಸಂವೇದೀ ಸಶಕ್ತ ಚಿತ್ರ, ಶಿಲ್ಪ, ಇನ್‌ಸ್ಟಾಲೇಷನ್‌ಗಳು, ಅರ್ಚನಾ ಹಂದೆಯವರ ಎಚ್ಚಿಂಗ್ ಮೂಲದ ತೀವ್ರ ಸ್ತ್ರೀಸಂವೇದೀ ಅಭಿವ್ಯಕ್ತಿಗಳೇ ಅಲ್ಲದೆ ವಿಡಿಯೋ ಅಭಿವ್ಯಕ್ತಿಗಳು installationಗಳು ಗಣನೀಯ 'The veil-shop', 'other side of the grass is always green' ಅಭಿವ್ಯಕ್ತಿಗಳು ಸಮಕಾಲೀನ ಸ್ತ್ರೀಸಂವೇದೀ ತೀವ್ರತೆಗೆ ಪುರಾವೆಗಳಂತಿದ್ದವು.



ಶಂಕರಗೌಡ
ಬೆಟ್ಟದೂರುರವರ
'ಜಗದ್ರಕ್ಷಕ',
ಜಲವರ್ಣ ಕೃತಿ.

ಹಾಗೂ ಸುರೇಖರವರ ವಿಡಿಯೋ/ಬಹುಮಾಧ್ಯಮ ಮೂಲದ 'Threading the thread,' 'one to one,' 'reahching my self,' ಮೊದಲಾದವು ಗಣನೀಯ. ಮೈಸೂರಿನ ಎನ್.ಎಸ್. ಹರ್ಷರವರ ಸ್ಥಳ ನಿರ್ದಿಷ್ಟ ಇನ್‌ಸ್ಟಾಲೇಷನ್ ಮತ್ತು ಅಭಿನೀತಗಳು/Performance/Happenings ನಂತ ಅಭಿವ್ಯಕ್ತಿಗಳು ಹಾಗೂ ವಿಶಿಷ್ಟ ಆಯಾಮದ ವರ್ಣ ಚಿತ್ರಗಳು ಐತಿಹಾಸಿಕ ಪ್ರಜ್ಞೆಯ ಜತೆಜತೆಗೇ ಆಧುನಿಕೋತ್ತರ (post modern) ಸಮಕಾಲೀನತೆಯ ಸ್ಪರ್ಶದಿಂದ ಅನನ್ಯ ದೃಶ್ಯಾನುಭವಕ್ಕೆ ತೆರೆದುಕೊಳ್ಳುತ್ತವೆ. ಮಾನಯ್ಯ ಬಡಿಗೇರ್‌ರವರ ಶಿಲ್ಪಗಳು ದೈವೀಕತೆಯ ಆತ್ಮದಂತೆ ಮೂಡಿಬಂದಿವೆ. ಶಿವಶಿವೆಯರ ರೂಪ ಸಂಬಂಧಿತ ಶಿಲ್ಪಗಳು ಆದಿಮ ಮತ್ತು ಜಾನಪದೀಯವೇ ಅಲ್ಲದೆ ಸಂಪ್ರದಾಯ ಮತ್ತು ಪರಂಪರೆಗಳಿಗೆ ಹತ್ತಿರವಾಗಿವೆ.

ಜಿ.ಎಲ್.ಎನ್. ಸಿಂಹ (ಜನನ : ೧೯೩೭) ಮೈಸೂರು ಚಿತ್ರಶೈಲಿಯ ಪರಂಪರೆಯ ಟಿಸಿಲಿನಂತೆ ದೈವೀಕ ಧ್ಯಾನಮಯತೆಯಿಂದ ಚಿತ್ರಿಸಿರುವ ಕೃತಿಗಳು ಗಣನೀಯ. ತಮ್ಮ ಬದುಕನ್ನೂ ಕಲೆಯನ್ನೂ ದೈವೀಕವಾಗಿಯೇ ಪರಿಗಣಿಸಿರುವ ಸಿಂಹರವರು ೨೦೧೭ರ ಸಂದರ್ಭಧಲ್ಲಿಯೂ ದೈವೀಕ ಕೃತಿಗಳ ಸೃಷ್ಟಿಶೀಲ ಪ್ರವೃತ್ತಿಗೆ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರ 'ಶ್ರೀಸೂಕ್ತ', 'ಪುರುಷ ಸೂಕ್ತ', 'ರುದ್ರಸೂಕ್ತ', 'ಕಾಳಿಕಾ ಪುರಾಣ', 'ಗಣೇಶ ಪುರಾಣ', 'ತ್ರಿಮೂರ್ತಿ ಸಂಭವ', 'ಅಶ್ವೀದೇವತೆಯ ಜನನ', 'ಸಮುದ್ರ ಮಂಥನ' ಮೊದಲಾದ ಚಿತ್ರಕೃತಿಗಳು ಪುರಾಣ ಮೂಲದ ದಟ್ಟ ರಗಳೇ ಅಲ್ಲದೆ ಕರಕುಶಲತೆಯ ಪಾರಮ್ಯವನ್ನು ಅರಗಿಸಿಕೊಂಡಿವೆ. ವಿಜಯಾ ಹಾಗರಗುಂಡಗಿ ಸುರಪುರ ಶೈಲಿಯಲ್ಲಿ ದೇವದೇವಿಯರನ್ನು ಚಿತ್ರಿಸುತ್ತಲೇ ನಡೆದಿದ್ದಾರೆ. ಬಿ.ಕೆ.ಎಸ್. ವರ್ಮರವರ ದೈವೀಕ ದೃಶ್ಯಲೋಕದಲ್ಲಿ ಕಾಣಿಸಿಕೊಂಡ ದೇವಾನುದೇವತೆಗಳ ವೈವಿಧ್ಯಮಯ ರೂಪಗಳು ಜನಪ್ರಿಯತೆಯ ಪರಾಕಾಷ್ಠೆ ತಲುಪಿವೆ. ಇಲ್ಲಿ ಪ್ರಕೃತಿಯನ್ನೇ ದೈವೀಕತೆಯಿಂದ ನೋಡಿರುವ, 'ಮೇಘಮಾಲಿನಿ', 'ವೃಕ್ಷಮಾಲಿನಿ', 'ನಿಸರ್ಗಧಾರಾ' ದೇವ-ದೇವೀಧ್ಯಾನ ಮೂಲದ 'ಧ್ಯಾನಶಿವ', 'ವಿಶ್ವಂಬರ', 'ಸೀತಾರಾಮ ಕಲ್ಯಾಣ' ಮತ್ತು ಶ್ರೀನಿವಾಸ ಕಲ್ಯಾಣ ಕೃತಿಗಳು ಕೃತಿಗಳ ಧ್ಯಾನವೇ ಅಪೂರ್ವ. ಕೆ.ಎಸ್. ಶ್ರೀಹರಿಯವರ (ಜನನ : ೧೯೬೮) ದೈವೀಕ ದೃಶ್ಯಧ್ಯಾನದಂತಹ ಕೃತಿಗಳು ಮೈಸೂರು ಶೈಲಿಯಲ್ಲಿ ಮೂಡಿಬಂದಿವೆ. ಪರಂಪರೆಯ ಪ್ರಜ್ಞೆ ಮತ್ತು ಮೈಸೂರು ಶೈಲಿಯ ಚಿತ್ರಕ ಕುಶಲತೆಗಳು ಅವರ ಚಿತ್ರಕೃತಿಗಳ ದೇವ ದೇವಿಯರ ರೂಪಕಲ್ಪನೆಗಳಿಗೆ ಭವ್ಯತೆಯನ್ನು ಅಲಂಕರಿಸಿವೆ. ೨೦೧೭ರ ಅವರ 'ಸಪ್ತಮಾತೃಕೆ ಯರು' ಕೃತಿಮಾಲೆಯು ಮೈಸೂರಿನ ರಾಮ್‌ಸನ್ಸ್ ಆಶ್ರಯದಲ್ಲಿ

ಮೂಡಿಬಂದಿದೆ. 'ಬ್ರಾಹ್ಮಿ', 'ಮಾಹೇಶ್ವರಿ', 'ಕೌಮಾರಿ', 'ವೈಷ್ಣವಿ', 'ವಾರಾಹಿ', 'ಇಂದ್ರಾಣಿ' ಮತ್ತು 'ಚಂಡಿಕಾ' ಚಿತ್ರಕೃತಿಗಳು ಅವು. ಸದಾ ದೈವೀಕ ಧ್ಯಾನದಲ್ಲಿಯೇ ಚಿತ್ರಿಸುವ ಎಶವಂತ ಹಿಬಾರೆ ತೈಲವರ್ಣ ಮಾಧ್ಯಮದಲ್ಲಿ ಅತ್ಯಂತ ಕುಶಲತೆಯಿಂದ ದೇವರೂಪಗಳನ್ನು ಚಿತ್ರಿಸುತ್ತಾರೆ. ಅವರ ದೃಶ್ಯ ಕಲೆಯ ಧ್ಯಾನದಲ್ಲಿ ಮೂಡಿಬಂದ ಸರಸ್ವತಿ ದೇವದೇವಿಯರ ಚಿತ್ರಗಳು ಗಮನಾರ್ಹ. ಶಿವ, ವಿಷ್ಣುರೂಪೀ ಬಸವಣ್ಣ, ಅಕ್ಕಮಹಾದೇವಿಯವರ ಚಿತ್ರಸಮೂಹಗಳಲ್ಲಿ ಐತಿಹಾಸಿಕ ಸಂದರ್ಭಗಳ ದಾಖಲೀಕರಣವೂ ದೈವೀಕತೆ ಯೊಂದಿಗೆ ಹಾಸುಹೊಕ್ಕಿದೆ. ಭಾರತೀಯ ಬದುಕಿನ ದೈವೀಕ ಭಾವಲೋಕಕ್ಕೆ ದೇವತೆಗಳ ದರ್ಶನ ಭಾಗ್ಯವನ್ನು ತಮ್ಮ ಕೃತಿಗಳ ಮೂಲಕ ನೀಡುತ್ತಿರುವ ಇನ್ನೂ ಹಲವರಲ್ಲಿ ಗಂಜೀಫ ರಘುಪತಿ ಭಟ್, ಪ್ರಭಾಮಲ್ಲೇಶ್, ಮೀರಾಕುಮಾರ್, ಎಫ್.ವಿ. ಚಿಕ್ಕಮಠ, ಕಮಲ್ ಅಹಮದ್ ಮೊದಲಾದವರು ಇದ್ದಾರೆ. 'ನೋಡಿದ್ದನ್ನು' ಮಾತ್ರ 'ನಂಬುವ' 'ಆಧುನಿಕ', 'ನೈಜತೆ', ಮತ್ತು 'ಸಮಕಾಲೀನತೆ'ಗಳ ಸಂದರ್ಭಗಳು ಪಶ್ಚಿಮ ಮತ್ತು ಯೂರೋಪುಗಳಲ್ಲಿ ಕಾಣಿಸಿಕೊಂಡ ಸಂದರ್ಭವು ನಮ್ಮವರನ್ನು ಪ್ರಭಾವಿಸಿದರೂ, ಅತ್ತ ಹೊರಳಿನೋಡಿದರೂ ಸಂಪೂರ್ಣವಾಗಿ ಅನುಸರಿಸದೆ ನಡೆದವರೇ ಹೆಚ್ಚು. ನಮ್ಮ ಪರಂಪರೆಯ ಸೆಳೆತವು ೨೧ನೆಯ ಶತಮಾನದಲ್ಲಿಯೂ ಮುಂದುವರೆದಿರುವುದು ನಮ್ಮ ಬೇರುಗಳ ಸಶಕ್ತತೆ, ಮತ್ತು ಸಮಕಾಲೀನ ಮಾಧ್ಯಮಗಳನ್ನೂ ಅರಗಿಸಿಕೊಂಡು ಮೂಡಿಬರುವ ಸಾಮರ್ಥ್ಯಗಳನ್ನು ಅವಲಂಬಿಸಿದೆ. ಸಂಪ್ರದಾಯ ಮಾಧ್ಯಮಗಳೂ ಇದ್ದೇ ಇರುತ್ತವೆ. ಈ ಹಿನ್ನೆಲೆಯಲ್ಲಿ ೨೦೧೭ರ ಸಂದರ್ಭದ ರಾಜ್ಯ ಲಲಿತಕಲಾ ಅಕಾಡೆಮಿಯ ಅಖಿಲ ಭಾರತ ಮೊದಲನೆಯ ಪ್ರದರ್ಶನವೊಂದರಲ್ಲಿ ಅರಮನೆಯ ಕಲಾವಿದರಾಗಿದ್ದ ಸುಬ್ರಹ್ಮಣ್ಯ ರಾಜುರವರ ಮೊಮ್ಮಗಳು ರಾಣಿರೇಖಾ 'ದುರ್ಗಾ' ಚಿತ್ರಕೃತಿಯನ್ನು ಸಮಕಾಲೀನವಾಗಿ ಚಿತ್ರಿಸಿದ್ದು, ಚಿನ್ನದ ಹಾಳೆಗಳನ್ನು ಬಳಸಿದ್ದು ಗಮನಾರ್ಹ. ಹೀಗಾಗಿ ಇಂದಿಗೂ ನಾಳೆಗೂ ನಮ್ಮ ಸಂಪ್ರದಾಯಕರಕುಶಲಿಗಳು, ದೇವ–ದೇವಿಯರ ರೂಪ ವೈಭವವನ್ನು ಸೃಷ್ಟಿಸುತ್ತಲೇ ಇರುತ್ತಾರೆ. ನಮ್ಮ ಸಮಾಜದ ಹಲವು ನೆಲೆಯ ಸಾಂಸ್ಕೃತಿಕ ಬದುಕಿನಲ್ಲಿ ವೈವಿಧ್ಯಮಯ ಕಲೆಯ ಸೃಷ್ಟಿಗೆ ಸಂಪ್ರದಾಯ ಮತ್ತು ಸಮಕಾಲೀನ ಕಲಾವಿದ/ಕಲಾವಿದೆಯರು ಕಾರಣರಾಗುತ್ತಲೇ ಇರುತ್ತಾರೆ. ಶಿವ, ವಿಷ್ಣು, ಕಾಳಿ, ಮಹಾವೀರ, ಬುದ್ಧರೇ ಅಲ್ಲದೆ ಸಮಕಾಲೀನ ಭಾವಯಾನಗಳೂ ಹೊಸ ಭಾವರೂಪಗಳು ಹೊಸಹೊಸ ದೃಶ್ಯಲೋಕದಲ್ಲಿ ಅಪೂರ್ವ ರೂಪದಲ್ಲಿ ಕಾಣಿಸಿಕೊಳ್ಳುತ್ತಲೇ ಇರುತ್ತವೆ. ಅದೊಂದು ನಿರಂತರ ದೃಶ್ಯಕಲೆಯ ಧ್ಯಾನವೇ ಸರಿ.

**ಟಿಪ್ಪಣಿಗಳು :**

1. "There are endless images in each thing, depending on how we see it or make its equivalent. In fact we see things for sure only when we make its equivalent. Every time we make an equivalent (in a material or method), we discover a new image.......... This continuous discovery is what makes for the magic in the making".

K.G. Subramaniyan in magic of
Making P:180
seagull Books,
Calcutta, 2007.

೨. ವಿ.ಜಿ. ಅಂದಾನಿಯವರ ಆಕ್ರಿಲಿಕ್ ಬಣ್ಣಗಳ ಮಾಧ್ಯಮದ 'ಅಕ್ಕಮಹಾದೇವಿ' ಕೃತಿಯು ಬೆಂಗಳೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಂಗ್ರಹದಲ್ಲಿದ್ದು ಕನ್ನಡಭವನದಲ್ಲಿ ಸಾರ್ವಜನಿಕವಾಗಿ ತೆರೆದ ಗೋಡೆಯ ಮೇಲೆ ೨೦೧೭ರಲ್ಲಿ ಪ್ರದರ್ಶಿಸಲ್ಪಟ್ಟಿತ್ತು.

3. ನೋಡಿ : ಸಮಾಹಿತ, ಸಂ: ರಾಘವೇಂದ್ರಪಾಟೀಲ, ಸಂಚಿಕೆ–೧, ಜನವರಿ–ಫೆಬ್ರವರಿ, ೨೦೧೬, ಪುಟಗಳು : ೧೦೨–೧೦೪.

ಪ್ರ ಸಮಾಹಿತ ಟ್ರಸ್ಟ್, ಧಾರವಾಡ–೧.

೪. ಡೆರಿಡಾ(೧೯೩೦–೨೦೦೪) ತನ್ನ ನಿರಚನಾವಾದ (deconstruction theory) ದಿಂದಾಗಿ ವಿಖ್ಯಾತನು. ಅವನ ಅಯೋಮಯ, ವಿವಾದಾಸ್ಪದವಾದ ಹಾದಿಯ ಫಲವೇ ನಿರಚನೆ. ಹಿಂದೂ ಮತ್ತು ಬೌದ್ಧ ತಾತ್ವಿಕರನ್ನು ತನ್ನ ನಿರಚನೆಯ ವಾಗ್ವಾದದಿಂದಾಗಿ ಆಗಾಗ ಆಕ್ರೋಶ, ಗೊಂದಲಗಳಿಗೆ ಒಳಗಾಗಿಸಿದಂತೆ ಭಾರತೀಯ ಮಾಧ್ಯಮಿಕರೂ ತಮ್ಮ ಶೂನ್ಯವಾದ, ನಾಸ್ತಿಕತ್ವಗಳಿಗಾಗಿ ದೂಷಿಸಲ್ಪಟ್ಟವರೇ ಆಗಿದ್ದಾರೆ.

**ಶಬ್ದಸೂಚಿ :**

ಹ

ದೃಶ್ಯಕಲಾ ಇತಿಹಾಸ



ಕನ್ನಡ ದೃಶ್ಯ ಸಂಸ್ಕೃತಿಯ ಸಾಕ್ಷರತೆಗೆ ಗಣನೀಯ ಕೊಡುಗೆ ನೀಡಿರುವವರು ಕೆ.ವಿ. ಸುಬ್ರಹ್ಮಣ್ಯಂ (ಜನ 18–12–1949). ದೃಶ್ಯ ಕಲಾವಿದ / ಕಲಾವಿದೆಯರ ಅಭಿವ್ಯಕ್ತಿಗಳನ್ನು ಗಂಭೀರ ಕಣ್ಣು, ಮನಸ್ಸುಗಳಿಗೇ ಅಲ್ಲ ಸಾಮಾನ್ಯರನ್ನೂ ಮುಟ್ಟುವ ನಿರಂತರ ಪ್ರಯತ್ನವು ಅವರಿಂದ ನಡೆದಿದೆ. ಕನ್ನಡ ಪತ್ರಿಕೆ, ಕೆಟಲಾಗ್, ಬರಹಗಳು ಹಾಗ ಮಾತುಕತೆಗಳೂ ಅವರಿಂದ ಮೂಡಿಬರುವ ಉದ್ದೇಶವೇ ಇದು. ಅವರ ಹಲವು ಪ್ರಕಟಣೆಗಳಲ್ಲಿ 'ವೆಂಕಟ ಸಮಕಾಲೀನ ಪುನರಾವಲೋಕನ', 'ಕರ್ನಾಟಕದ ಆಧುನಿಕ ಶಿಲ್ಪಕಲೆ', 'ಕಲಾ ಸಂವೇದನೆಯ ಒಳನೋಟಗಳ 'ಮುಖಗಳೊಂದಿಗೆ ಮುಖಾಮುಖಿ', 'ಇನ್‌ಸ್ಟಾಲೇಷನ್ ಕಲಾ ಪ್ರಪಂಚ' ಮುಖ್ಯವಾದುವು. ಕರ್ನಾಟಕ ಲಲಿತಕ ಅಕಾಡೆಮಿಯ ಗೌರವ ಪ್ರಶಸ್ತಿ, ಹರ್ಯಾಣದ ಸುಭದ್ರಾಕುಮಾರಿ ಚೌಹಾಣ್ ಜನ್ಮಶತಮಾನೋತ್ಸವ ಸಮ್ಮಾನ್, (2004 **United Writers Association of India,** ಚೆನ್ನೈನ **Fellow** (2004).ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸುವರ್ಣ ಕರ್ನಾಟಕ ವರ್ಷದ ಗೌರವ ಸನ್ಮಾನ, 2006–2007, 'ವಿ.ಸೀ. ಸಂಪದ' ಗೌರವ ಪುರಸ್ಕಾರ 20 ಇತ್ಯಾದಿಗಳು ಸಂದಿವೆ.

## ಮುನ್ನುಡಿಯಿಂದ

ಕನ್ನಡದಲ್ಲಿ ನಿರಂತರವಾಗಿ ಕಲಾಬರಹಗಳನ್ನು, ವಿಮರ್ಶೆಯನ್ನು ಸುದೀರ್ಘವಾಗಿ ಬರೆಯುತ್ತಿರುವ ಕೆ.ವಿ.ಸುಬ್ರಮಣ್ಯಂ ಅವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯು 2016ರ 'ಗೌರವ ಫೆಲೋಷಿಪ್' ನೀಡಿ ಗೌರವಿಸಿ ಅಕಾಡೆಮಿ ನಿಯಮಾಳಿಯಂತೆ 'ಗೌರವ ಫೆಲೋಷಿಪ್' ಪಡೆದ ಕಲಾವಿದರು ಅವರ ಕನಿಷ್ಠ ಎರಡು ಕಲಾಕೃತಿಗಳನ ಅಕಾಡೆಮಿಯ ಸಂಗ್ರಹಕ್ಕೆ ನೀಡುವಂತೆ ಈ ಗೌರವ ಪಡೆದ ಕಲಾಬರಹಗಾರರು ತಮ್ಮ ಬರಹದ ಹಸ್ತಪ್ರತಿಯನ ಸಿದ್ಧಪಡಿಸಿ ನೀಡಬೇಕಾಗುತ್ತದೆ. ಇಂತಹ ಹಸ್ತಪ್ರತಿಯನ್ನು ಅಕಾಡೆಮಿಯೇ ಪ್ರಕಟಿಸುವ ಒಂದು ನವೀಕೃತ ಯೋಜ ಈಗ ಪ್ರಾರಂಭವಾಗಿದೆ. ಸಂಪೂರ್ಣ ನಿಷ್ಕ್ರಿಯೆಯಾಗಿದ್ದ 'ಫೆಲೋಷಿಪ್ ಯೋಜನೆ' ಸುವರ್ಣ ಸಂಭ್ರಮದ ಅವಧಿಯ ಸಂಚಲಗೊಂಡು 100ರಷ್ಟು ಯುವ ಕಲಾವಿದರಿಗೆ ಒಂದು ಲಕ್ಷ ರೂ. ಫೆಲೋಷಿಪ್ ಮತ್ತು ಮೂವರು ಹಿರಿ ಕಲಾವಿದರಿಗೆ ತಲಾ ಎರಡು ಲಕ್ಷ ರೂ. ಗಳೊಂದಿಗೆ 'ಗೌರವ ಫೆಲೋಷಿಪ್' ನೀಡಿ ಅಕಾಡೆಮಿ ಗೌರವಿಸಿದೆ. 201 ಗೌರವ ಫೆಲೋಷಿಪ್ ಶ್ರೀ ಕೆ.ವಿ.ಸುಬ್ರಮ್ಮಣ್ಯಂ ಅವರಿಗೆ ಲಭಿಸಿದೆ. ಇಂತಹ ಗೌರವದ ನೆಪದಲ್ಲಿ ಶ್ರೀ ಕೆ.ವಿ.ಸುಬ್ರಮ ಅವರು ಅಕಾಡೆಮಿಗೆ 'ದೃಶ್ಯಧ್ಯಾನ' ದಂತಹ ಕಲಾ ಸಾಹಿತ್ಯ ಕೃತಿ ನೀಡಿದ್ದಾರೆ.

–ಡಾ.ಎಂ.ಎಸ್.ಮೂರ್ತಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆ
ಬೆಂಗಳೂರು